|| ಓಂ ನಮಃ ಶಿವಾಯ ||



# ಕಾಶೀ ಧಾಮ ಯಾತ್ರೆ



## ಒಂದನೇ ಅಧ್ಯಾಯ

ನಾರ್ಯಾವರ್ತ ಸಮೋದೇಶಃ ನಕಾಶಿ
ಸದೃಶಿ ಪುರೀ | ನ ವಿಶ್ವ ಸಮಲಿಂಗಂ
ಕ್ವಾಪಿ ಬ್ರಹ್ಮಾಂಡ ಗೋಲಕೆ ||

ಒಂದು ಕಾಲದಲ್ಲಿ ಬ್ರಹ್ಮಪುತ್ರ ನಾರದನು ಪಾತಾಳ ಲೋಕವನ್ನು ಸಂಚರಿಸಿ ಹಿಂತಿರುಗಿ ಬಂದು ಪಾತಾಳವನ್ನು ಸ್ವರ್ಗದಿಂದಲೂ ಉತ್ತಮವೆಂದು ಶುಭಸಂಪನ್ನವೆಂದು ಹೇಳುತ್ತಾನೆ. ಪಾತಾಳದಿಂದಲೂ ಆರ್ಯಾವರ್ತ ದೇಶ ಉತ್ತಮವೆಂದು, ಎಲ್ಲಾ ದ್ವೀಪಕ್ಕಿಂತ ಜಂಬೂ ದ್ವೀಪ ಉತ್ತಮವೆಂದು, ಅದರಲ್ಲೂ ಒಂಬತ್ತು ವರ್ಷಗಳಲ್ಲಿ ಭಾರತ ವರ್ಷ ಶ್ರೇಷ್ಠ, ಸರ್ವೋತ್ತಮವೆಂದು, ಈ ಭಾರತ ವರ್ಷದಲ್ಲಿ ವಿಂಧ್ಯ ಮತ್ತು ಹಿಮಾಲಯಗಳ ಮಧ್ಯ ಭಾಗ ಬಹುಶಃ ಪುಣ್ಯಪ್ರದವೆಂದು, ಧರ್ಮದ ಕೇಂದ್ರ ಬಿಂದುವೆಂದೂ, ಇದರಲ್ಲೂ ಗಂಗಾ ಯಮುನಾ ನದಿಯ ಮಧ್ಯಭಾಗ ಪಾವನ ಪವಿತ್ರ ಪೃಥ್ವಿ "ಅಂತರ್ವೇದಿ" ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ ಎಂದು ಹೇಳುತ್ತಾನೆ.

ಕ್ಷೇತ್ರಗಳಲ್ಲಿ ಕುರುಕ್ಷೇತ್ರ, ಅರಣ್ಯಗಳಲ್ಲಿ ನೈಮಿಶಾರಣ್ಯ, ತೀರ್ಥಗಳಲ್ಲಿ ಪ್ರಯಾಗ ಹಾಗೆಯೇ ಧರ್ಮಸ್ಥಳಗಳಲ್ಲಿ ಕಾಶಿ (ವಾರಣಾಸಿ) ನಗರಕ್ಕೆ ಮಹತ್ವವನ್ನು

ಕೊಟ್ಟಿದ್ದಾರೆ. ಇಷ್ಟು ಮಾತ್ರವಲ್ಲ, ಇಲ್ಲಿಯ ರಾಜ ದಿವೋದಾಸ ದೊಡ್ಡ ಧರ್ಮಾತ್ಮನಾಗಿದ್ದ ಹಾಗೂ ಪ್ರತಾಪಿಯಾಗಿದ್ದ ಎಂದರೆ ಅರವತ್ತ ನಾಲ್ಕು ಯೋಗಿನಿ ಮತ್ತು ಐವತ್ತ ಆರು ವಿನಾಯಕ ಹಾಗೂ ಭೈರವ ಇವರುಗಳ ಪ್ರಯತ್ನಗಳು ವಿಫಲವಾಯಿತು. ಕಾಶಿಪುರಿಯ ಸ್ವಲ್ಪ ಸಮಯದ ವಿಯೋಗವನ್ನು ಶಿವನಿಂದ ತಡೆಯಲಾಗದೆ ವಿಷ್ಣು ಹಾಗೂ ಲಕ್ಷ್ಮಿಯ ಪ್ರಯತ್ನದಿಂದ ದಿವೋದಾಸನನ್ನು ಪರಾಜಯಗೊಳಿಸಿ ಮುಕ್ತಿ ಮಂಟಪ, ಜ್ಞಾನವ್ಯಾಪಿಯನ್ನು ಪ್ರವೇಶ ಮಾಡುತ್ತಾನೆ ಹಾಗೂ ಕಾಶೀ ಸೇವನೆಯ ಲಾಭವನ್ನು ಪಡೆಯುತ್ತಾನೆ. ಕಾಶೀಪುರಿಯ ಮಹಾತ್ಮೆಯನ್ನು ನಾನು ಎಲ್ಲಿಯವರೆಗೆ ವರ್ಣಿಸಲಿ ಎಂದು ನಾರದನು ಸಂಕಟ ಪಡುತ್ತಾನೆ. ಕಾಶೀಪುರಿಯು ಮೂರು ಲೋಕದಲ್ಲೂ ಶ್ರೇಷ್ಠವಾದುದು. ಕಾಶಿಯಲ್ಲಿ ಗಂಗಾಸ್ನಾನ ಮಾತ್ರದಿಂದಲೇ ತನ್ನ ಇಹ ಹಾಗೂ ಪೂರ್ವಜನ್ಮದ ಪಾಪ-ತಾಪದಿಂದ ಮುಕ್ತನಾಗುತ್ತಾನೆ ಹಾಗೂ ಮೋಕ್ಷವನ್ನು ಪಡೆಯುತ್ತಾನೆ. ಈ ಪವಿತ್ರ ಪುರಿಯ ಪ್ರದಕ್ಷಿಣೆಯ ಕುರಿತು ಹೇಳುತ್ತಾರೆ. ಕಾಶಿ ಪ್ರದಕ್ಷಿಣಾ ಯೇನ ಕೃತಾ ತ್ರೈಲೋಕ್ಯ ಪಾವನೀ | ಸತ್ಯದ್ವೀಪಾ ಸಾದ್ವಿಶೈಲಾ ಕೃತಾತೇನ (ಪ್ರದಕ್ಷಿಣಾ)

ಇದು ನಾರದೀಯ ಪುರಾಣದ ಪ್ರಮಾಣವಾಗಿರುವುದು.

ಅಂದರೆ ಯಾವ ಮನುಷ್ಯನು ಪಾಪಿಯಾಗಿರಲಿ, ಪುಣ್ಯಾತ್ಮನಾಗಿರಲಿ, ತ್ರಿಭುವನ ಪಾವನಿಯಾದ ಕಾಶಿಯನ್ನು ಪ್ರದಕ್ಷಿಣೆ ಮಾಡಿದರೆ ಸಪ್ತ ದ್ವೀಪ, ಸಪ್ತ ಸಮುದ್ರ, ಏಳು ಪರ್ವತ ಜೊತೆ ಭೂಲೋಕವನ್ನು ಪ್ರದಕ್ಷಿಣೆ ಮಾಡಿದ ಫಲವನ್ನು ಹೊಂದುತ್ತಾನೆ. ಇದಕ್ಕೆ ಸಂಶಯವಿಲ್ಲ.

ಸ್ಕಂದ ಪುರಾಣದಲ್ಲಿ ಪ್ರದಕ್ಷಿಣೆಯಿಂದಲೂ ಹೆಚ್ಚಿಗೆ ಫಲವನ್ನು ನಾಮ ಉಚ್ಚಾರಣೆಯಿಂದಲೇ ಪಡೆಯಬಹುದೆಂದು ಹೇಳುತ್ತಾರೆ.

"ಕಾಶೀ ಕಾಶೀತಿ ಕಾಶೀ ತಿ ರಸನಾಯದಿ ಸಾಸ್ಯತ |
ಯಸ್ಯಕಸ್ಯಾಪಿ ಭೂಮಿಷ್ಠಾಕ್ಷೈತ್ಸಮುಕ್ತೋ ನಾತ್ರ ಸಂಶಯ || "

***

3.

# ಎರಡನೇ ಅಧ್ಯಾಯ

ಕೃತ ಯುಗದಲ್ಲಿ ಶೂರ ವೀರನಾದ ಧ್ಯೂರಿದ್ಯುಮ್ನ ಎಂಬ ಹೆಸರಿನ ಒಬ್ಬ ರಾಜನಿದ್ದನು. ಅವನಿಗೆ ಸಾವಿರಾರು ರಾಣಿಯರಿದ್ದರು. ವಿಭಾವರಿ ಎಂಬ ಪಟ್ಟದ ರಾಣಿಯಿದ್ದಳು. ದೈವ ವಶದಿಂದ ಕಾಮದೇವನ ವಶೀಭೂತನಾಗಿ ಸಮಸ್ತ ರಾಜ್ಯವನ್ನು ಶತ್ರುಗಳಿಂದ ಸೋತು ತನ್ನ ಪತ್ನಿ ವಿಭಾವರಿಯೊಂದಿಗೆ ವಿಂಧ್ಯ ಪರ್ವತವನ್ನು ಸೇರಿದನು. ಸ್ವಲ್ಪ ಸಮಯದ ನಂತರ ವಿಭಾವರಿಯು ರಾಜನಲ್ಲಿ ಹೇಳಿದಳು, "ಹೇ ರಾಜನ್, ತಾವು ಕಾಮನ ವಶಕ್ಕೆ ಸಿಕ್ಕಿ ರಾಜ್ಯವನ್ನೂ, ಇತರ ಸ್ತ್ರೀಯರನ್ನೂ ಕಳೆದುಕೊಂಡಿರಿ. ಈಗ ನನ್ನಿಂದ ಮತ್ತು ನಿಮ್ಮಿಂದ ಈ ನಿರ್ಜನ ಪ್ರದೇಶದಲ್ಲಿ ಕಾಲ ಕಳೆಯಲು ಸಾಧ್ಯವಿಲ್ಲ. ಯಾವ ಪುರುಷನು ಧರ್ಮ, ಅರ್ಥಗಳನ್ನು ತ್ಯಾಗ ಮಾಡಿ ಕಾಮ ದೇವನ ವಶವಾಗುತ್ತಾನೋ ಅವನಿಗೆ ನಿಮ್ಮದೇ ಗತಿಯಾಗುತ್ತದೆ." ನಂತರ ರಾಜ ರಾಣಿ ಇಬ್ಬರೂ ಹಸಿವು, ಬಾಯಾರಿಕೆಯಿಂದ ತನ್ನ ಹಿಂದಿನ ಕರ್ಮಗಳನ್ನು ನೆನೆಸಿಕೊಳ್ಳುತ್ತಾ ತಿರುಗುತ್ತಿದ್ದರು. ಒಂದು ದಿನ ರಾಜನ ಮನಸ್ಸಿಗೆ ಜೀವನದ ಆಸೆಯು ಚಿಗುರಿ ರಾಣಿಯನ್ನೇ ತಿಂದು ಬದುಕಬೇಕೆಂದು ಕಂಡಿತು. ಇದನ್ನು ಗ್ರಹಿಸಿದ ರಾಣಿಯು ರಾಜನಿಗೆ, "ತಾವು ಹಸಿವು ಬಾಯಾರಿಕೆಯಿಂದ ಬಳಲಿ ಬೆಂಡಾಗಿದ್ದೀರಿ. ಆದ್ದರಿಂದ ನನ್ನ ಶರೀರದಿಂದ ಮಾಂಸವನ್ನು ತೆಗೆದು ತಿನ್ನಿರಿ ಹಾಗೂ ಪ್ರಾಣವನ್ನು ಕಾಪಾಡಿ" ಎಂದು ಹೇಳುತ್ತಾಳೆ. ಈ ನೀತಿ ವಚನಗಳನ್ನು ಕೇಳಿ ರಾಜನು ರಾಣಿಯನ್ನು ಕೊಂದು ಮಾಂಸವನ್ನು ತಿನ್ನಬೇಕೆಂದಿರುವಾಗ ಎರಡು ಸಿಂಹಗಳು ಆಡುತ್ತಾ ಅಲ್ಲಿಗೆ ಬಂದವು. ಸಿಂಹಗಳನ್ನು ಕಂಡು ರಾಜನು ಅಲ್ಲಿಂದ ಓಡುತ್ತಾನೆ. ನಾಲ್ಕು ಕ್ರೋಶ ಓಡಿದ ರಾಜನಿಗೆ ಧಾನ್ಯ ಮೂಟೆಗಳನ್ನು ಹೊತ್ತುಕೊಂಡು ಬರುವ ನಾಲ್ಕು ಜನ ಬ್ರಾಹ್ಮಣರು ಕಾಣ ಸಿಗುತ್ತಾರೆ. ಅವರನ್ನು ಕೊಂದು ಧಾನ್ಯವನ್ನು ತಿನ್ನಬೇಕೆಂದಿರುವಾಗ ಯಜ್ಞೋಪವೀತ ಮತ್ತು ಮೃಗ ಚರ್ಮವನ್ನು ಕಂಡನು. ಆಗ ಅವನಿಗೆ ಜ್ಞಾನೋದಯವಾಗಿ ತಾನು ಬ್ರಹ್ಮಹತ್ಯೆ ಮಾಡಿರುವೆನು. ಇದರಿಂದ ನೂರು ಜನ್ಮ ನರಕ ಯಾತನೆಯನ್ನು ಪಡೆಯುತ್ತೇನೆ. ಅಲ್ಲದೆ ಸ್ತ್ರೀ ವಧೆಯನ್ನು ಮಾಡಿರುವುದರಿಂದ ಐವತ್ತು ಕಲ್ಪ ನರಕವಾಸ ಮಾಡಬೇಕಾಗುವುದು ಎಂದು. ಇದರ ನಿವೃತ್ತಿಗಾಗಿ ಶಾಕಲ್ಯ ಮುನಿಯನ್ನು ಕಂಡು ತನ್ನ ತಪ್ಪನ್ನು ವಿಸ್ತಾರವಾಗಿ ಹೇಳಿ ಇದಕ್ಕೆ ಪ್ರಾಯಶ್ಚಿತ್ತವನ್ನು ಹೇಳಬೇಕೆಂದು ಬೇಡಿಕೊಳ್ಳುತ್ತಾನೆ. ಶಾಕಲ್ಯ ಮುನಿಯು ದಯೆ ತೋರಿ, "ನೀನು ಐದು ಕಪ್ಪು ವಸ್ತ್ರಗಳನ್ನು ತೊಟ್ಟುಕೊಂಡು ಕಾಶಿಗೆ ಹೋಗು. ಕಾಶಿಯ ದರ್ಶನ ಮಾತ್ರದಿಂದ ನಿನ್ನ

ಬಟ್ಟೆಗಳು ಬೆಳ್ಳಗಾಗುವುವು" ಎಂದು ಹರಸುತ್ತಾನೆ. ಇದನ್ನು ಕೇಳಿ ಭೂರಿದ್ಯುಮ್ನನು ಏಳು ದಿನಗಳ ಪ್ರಯಾಣವನ್ನು ಮಾಡಿ ಕಾಶಿಯನ್ನು ಸೇರುತ್ತಾನೆ. ಕಾಶಿಯ ದರ್ಶನ ಮಾತ್ರದಿಂದಲೇ ಅವನು ತೊಟ್ಟುಕೊಂಡ ಐದು ಬಟ್ಟೆಗಳು ಒಂದೊಂದಾಗಿ ಬಿಳುಪಾದವು. ಆ ಘೋರ ಪಾಪಿಯು ನಿತ್ಯ ಶ್ರೀ ಗಂಗಾಸ್ನಾನ ಮತ್ತು ವಿಶ್ವೇಶ್ವರನ ದರ್ಶನ ಪೂಜೆಗಳನ್ನು ಮಾಡತೊಡಗಿದನು ಹಾಗೂ ಗಂಗಾ ಗಂಗೇತಿಯೋ ಬ್ರೂಯಾತ್ ಎಂಬ ಮಂತ್ರವನ್ನು ಉಚ್ಛರಿಸುತ್ತಾ ವಿಶ್ವನಾಥ ಮಣಿಕರ್ಣಿಕಾ ತೀರ್ಥಗಳಲ್ಲಿ ಸ್ನಾನ ಪೂಜೆಗಳನ್ನು ಮಾಡಿದುದರಿಂದ ಮಂತ್ರ ಪ್ರಭಾವ ಹಾಗೂ ಕ್ಷೇತ್ರ ಸೇವನೆಯ ಪ್ರಭಾವದಿಂದ ಶಿವಸಾಯುಜ್ಯವಾದ ಮುಕ್ತಿಯನ್ನು ಪಡೆಯುತ್ತಾನೆ. ಆದ್ದರಿಂದ ಹೇ ಮುನಿವರ್ಯನೇ, ಕಾಶಿಯಲ್ಲಿ ಯಾವ ಜಾಗದಲ್ಲಾದರೂ, ಎಂತಹ ಪಾಪಿಯಾದರೂ ಮರಣವನ್ನು ಹೊಂದುತ್ತಾನೋ ಅವನು ಅವಶ್ಯವಾಗಿ ಮೋಕ್ಷವನ್ನು ಹೊಂದುತ್ತಾನೆ.

***

## ಮೂರನೇ ಅಧ್ಯಾಯ

ಭೃಗುಮುನಿ ಹೇಳುತ್ತಾನೆ, ಹೇ ಋಷಿಗಳೇ, ಕಾಶಿಯಲ್ಲಿ ಪತಿತರನ್ನು ಉದ್ಧಾರ ಮಾಡುವ ಗಂಗಾ ಹಾಗೂ ಮಣಿಕರ್ಣಿಕಾ ಕುಂಡ ಸಾಕ್ಷಾತ್ ಆದಿಲಿಂಗ ವಿಶ್ವನಾಥನು ವಿರಾಜಮಾನರಾಗಿದ್ದಾರೆ. ಇಂತಹ ಕಾಶಿಯ ಮಹಾತ್ಮೆಯನ್ನು ನಾವು ಹೇಗೆ ವರ್ಣಿಸಲಿ. ಯಾವ ಪುರುಷನು ಕಾಶಿಯಲ್ಲಿ ವಾಸ ಮಾಡುತ್ತಾ, ಪಾಪ ಮಾಡುತ್ತಾನೋ ಅವನು ಮೂರು ಸಾವಿರ ವರುಷ ರುದ್ರ ಪಿಶಾಚಿಯಾಗಿರುತ್ತಾನೆ. ಆದ್ದರಿಂದ ಕಾಶಿಯಲ್ಲಿ ವಾಸ ಮಾಡುತ್ತಾ ಧರ್ಮಕಾರ್ಯಗಳನ್ನೇ ಆಚರಿಸಬೇಕು. ಶ್ರೀ ವಿಶ್ವನಾಥನು ಕಾಶಿಯಲ್ಲಿ ವಾಸವಾಗಿದ್ದು, ಸಮಸ್ತ ಜೀವಿಗಳಿಗೆ ತಾರಕ ಮಂತ್ರವನ್ನು ಉಪದೇಶ ಮಾಡುತ್ತಾನೆ. ಇದರ ಪ್ರತಾಪದಿಂದ ಅವಶ್ಯವಾಗಿ ಮೋಕ್ಷ ಪ್ರಾಪ್ತಿಯಾಗುತ್ತದೆ. ಒಂದು ಸಮಯ ಸರಸ್ವತಿ ನದಿಯ ದಡದಲ್ಲಿ ವಸಿಷ್ಠ ಮುನಿ ಇರುವಲ್ಲಿ ವಾಮದೇವ ಮುನಿ ಬರುತ್ತಾನೆ. ಪರಸ್ಪರ ಮಾತುಕತೆಗಳನ್ನಾಡುತ್ತಾ ಕಾಶೀ ಕ್ಷೇತ್ರದ ಮಹಿಮೆಯನ್ನು ವರ್ಣಿಸುತ್ತಾನೆ. ಹೇ ತಪೋಧನ್, ಶ್ರೀ ವಿಶ್ವನಾಥನ ಕ್ಷೇತ್ರ

ಕಾಶಿ ಕ್ಷೇತ್ರ. ಇಲ್ಲಿ ಪಾಪಿ ಮತ್ತು ಪುಣ್ಯಾತ್ಮ ಇಬ್ಬರಿಗೂ ವಿಶ್ವನಾಥನು ಮುಕ್ತಿಯನ್ನು ಕೊಡುತ್ತಾನೆ. ತಾವು ಇಲ್ಲಿ ವಾಸವಾಗಿರುತ್ತೀರಿ. ಇದು ವಾರಣಾಸಿ ಶಂಕರನ ಆನಂದವನ. ಪೃಥ್ವಿಯಲ್ಲಿ ಅನೇಕ ತೀರ್ಥಗಳಿವೆ. ಆದರೂ ಸುಧಾರಣೆಗೆ ಕಾಶೀ ಕ್ಷೇತ್ರವೇ ಸರಿ. ಇಲ್ಲಿನ ಪುಣ್ಯ ಪ್ರಭಾವ ಅನಂತವಾಗಿದೆ. ಯಾರಾದರೂ ಒಂದು ವರ್ಷವಾದರೂ ಬ್ರಾಹ್ಮಣ ಭೋಜನ ಮಾಡಿಸುತ್ತಾನೋ ಅವನಿಗೆ ಗಂಗೆಯಲ್ಲಿ ಎಷ್ಟು ಮರಳುಗಳು ಇರುತ್ತದೋ ಅಷ್ಟು ವರ್ಷ ಭೋಜನ ಮಾಡಿಸಿದ ಫಲ ಸಿಗುತ್ತದೆ. ಯಾವ ಮನುಷ್ಯನು ಕಾಶಿಯಲ್ಲಿ ವಾಸ ಮಾಡುತ್ತಾನೋ ಅವನು ಶಿವನಿಗೆ ಸಮಾನವಾಗಿರುತ್ತಾನೆ. ಹೀಗೆ ವಸಿಷ್ಠ ವಾಮದೇವರುಗಳು ವಾರ್ತಾಲಾಪ ಮಾಡುತ್ತಾ ಕಾಶಿಗೆ ಹೋದರು. ಕಾಶಿಯ ಹತ್ತಿರ ತಲುಪುವಾಗ ಕಾಡಿನಲ್ಲಿ ನಿಶಾಚರರಾದ ವಿಕಾರ ರೂಪವುಳ್ಳ ಅನೇಕ ರಾಕ್ಷಸರು ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು ಎದುರಿಗೆ ಸಿಕ್ಕಿದರು. ಅವರ ನಾಯಕನಾದ ಡಕ್ ಎಂಬ ರಾಕ್ಷಸನು ತನ್ನ ಅನುಚರರನ್ನು ಕುರಿತು ಹೀಗೆಂದನು. ವಸಿಷ್ಠ ವಾಮದೇವರನ್ನು ತೋರಿಸಿ ಇವರನ್ನು ಬೇಗ ಹಿಡಿದುಕೊಳ್ಳಿರಿ. ಈ ವಸಿಷ್ಠನ ಪುತ್ರ ಪರಾಶರನು. ಘಾತಕವಾದ ನಾನಾ ಯಜ್ಞಗಳನ್ನು ಮಾಡಿ ಸಕುಟುಂಬವಾಗಿ ನನ್ನ ತಂದೆಯನ್ನು ಕೊಂದರು. ಈ ಆಜ್ಞೆಯನ್ನು ಕೇಳಿ ಕೋಪದಿಂದ ಕೊಲ್ಲಲು ಬಂದ ನಿಶಾಚರರನ್ನು ಶಂಕರನು ಮೂರನೇ ಕಣ್ಣನ್ನು ಬಿಟ್ಟು ಎಲ್ಲರನ್ನೂ ಭಸ್ಮ ಮಾಡಿ. ವಸಿಷ್ಠ ವಾಮದೇವರನ್ನು ರಕ್ಷಿಸಿದನು ಹಾಗೂ ಅದೃಶ್ಯನಾದನು. ಆಮೇಲೆ ಆ ಇಬ್ಬರು ಋಷಿಗಳು ಕಾಶಿಯಲ್ಲಿ ಮೂರು ಸಾವಿರ ವರ್ಷ ಕಾಲ ಶಂಕರನನ್ನು ಕುರಿತು ತಪಸ್ಸು ಮಾಡಿದರು ಹಾಗೂ ಈಶ್ವರನನ್ನು ಮೆಚ್ಚಿಸಿ ಕಾಶಿಯಲ್ಲಿ ಪ್ರತ್ಯಕ್ಷ ನಿರಂತರ ವಾಸ ಮಾಡುವಂತೆ ವರವನ್ನು ಪಡೆದರು. ಆದ್ದರಿಂದ ವಿಶ್ವನಾಥನು ಕಾಶಿಯಲ್ಲಿ ನಿರಂತರವಾಗಿ ವಾಸವಾಗಿರುತ್ತಾನೆ. ಯಾತ್ರಿಕರು ಕಾಶಿಯಲ್ಲಿ ವಿಶ್ವನಾಥನ ದರ್ಶನ ಮಾಡಿ ಈ ಕಥೆಯನ್ನು ಕೇಳುವವರ ಕಾಶಿ ವಾಸದಲ್ಲಿ ಯಾವ ವಿಘ್ನಗಳಿದ್ದರೂ ಪರಿಹಾರವಾಗುತ್ತದೆ. ಅವರ ಪಾಪಗಳನ್ನು ನಾಶ ಮಾಡಿ ಮುಕ್ತಿಯನ್ನು ಭಕ್ತವತ್ಸಲನಾದ ಶಿವನು ದಯಪಾಲಿಸುತ್ತಾನೆ.

***

# ನಾಲ್ಕನೇಯ ಅಧ್ಯಾಯ

ಒಂದು ಸಮಯದಲ್ಲಿ ಯಾಜ್ಞವಲ್ಕ್ಯನು ಹೇಳುತ್ತಾನೆ, ಶ್ರೀ ವಿಶ್ವನಾಥನ ಕಾಶೀಪುರಿಯಲ್ಲಿ ಯಾರು ಶರೀರವನ್ನು ತ್ಯಾಗ ಮಾಡುತ್ತಾರೋ ಅವರು ನಿಶ್ಚಯವಾಗಿ ಮೋಕ್ಷವನ್ನು ಪಡೆಯುತ್ತಾರೆ. ಕಾಶಿಯಲ್ಲಿ ಬ್ರಹ್ಮಸ್ವರೂಪವಾದ ಸಾವಿರಾರು ಶಿವಲಿಂಗಗಳು ಇವೆ. ಅವರಲ್ಲಿ ಜ್ಯೋತಿರ್ಲಿಂಗವಾಗಿ ವಿಶ್ವನಾಥನು ಇರುತ್ತಾನೆ. ಅವನ ದರ್ಶನದಿಂದ ಸಹಜವಾಗಿ ಮೋಕ್ಷವಾಗುತ್ತದೆ. ಜ್ಞಾನವ್ಯಾಪಿಯಲ್ಲಿ ಜಲಸೇವನೆಯಿಂದ ದಿವ್ಯದೃಷ್ಟಿಯಾಗುತ್ತದೆ. ಒಂದು ಸಮಯದಲ್ಲಿ ಶ್ವೇತ ದೇಶದ ರಾಜನು ಒಂದು ಸಾವಿರ ವರುಷ ಕಾಶಿಯಲ್ಲಿ ಮತ್ತು ಒಂದು ನೂರು ವರುಷ ಕೈಲಾಸದಲ್ಲಿ ರಾಜನಾಗಿರಲು ಶಂಕರನಿಂದ ಕಳುಹಿಸಲ್ಪಟ್ಟ ದೂರ್ವಾಸರಿಂದ ಕಾಶಿಯಲ್ಲಿ ಯಜ್ಞ ಮಾಡಿದನು. ಅಷ್ಟೇ ಪವಿತ್ರವಾದ ಪುರಿ ಕಾಶಿಪುರಿ ಇಲ್ಲದೆ. ಕಾಶಿಯಲ್ಲಿ ಬ್ರಹ್ಮನು ದಶಾಶ್ವಮೇಧ ಯಜ್ಞವನ್ನು ಕೂಡ ಮಾಡಿದನು ಮತ್ತು ಶಿವನಲ್ಲಿ ಮಾತುಕತೆಯಾಡುತ್ತಾ ಹೇಳುತ್ತಾನೆ. ಧನ್ಯರು ಕಾಶಿಪುರಿ ಮತ್ತು ಕಾಶಿವಾಸಿಗಳು ಹಾಗೂ ಕಾಶಿಯಲ್ಲಿ ಪ್ರಾಣತ್ಯಾಗ ಮಾಡುವವರು. ಕಾಶಿಯಲ್ಲಿ ಒಂದು ಕಾಮುಕನು ಕೂಡ ಅನರ್ಥದಿಂದ ಮುಕ್ತನಾಗುತ್ತಾನೆ. ಒಂದು ಕಾಲದಲ್ಲಿ ನಾರದನು ಮರುತನ ಯಜ್ಞದಲ್ಲಿ ಕಾಶಿ ಮಹಾತ್ಮೆಯನ್ನು ಕೇಳಿ ಆಶ್ಚರ್ಯಪಟ್ಟು ಸೂರ್ಯ ನಾರಾಯಣನಲ್ಲಿ ಕಾಶಿ ಮಹಾತ್ಮೆಯನ್ನು ಕೇಳುತ್ತಾನೆ. ಆಗ ಸೂರ್ಯನಾರಾಯಣನು ಹೇಳುತ್ತಾನೆ, "ಹೇ ನಾರದ, ನೀನು ಯಜ್ಞದಲ್ಲಿ ಕೇಳಿದ ವಿಷಯ ಎಲ್ಲವೂ ಅಕ್ಷರಶಃ ಸತ್ಯ. ಎಲ್ಲಾ ಸಮಯಗಳಲ್ಲಿ, ಎಲ್ಲಾ ಸಂದರ್ಭಗಳಲ್ಲಿ ಮನುಷ್ಯನಿಗೆ ಧರ್ಮವೇ ಸಹಾಯವಾಗಿರುತ್ತದೆ. ಆದರೆ ಕಾಶಿಯಲ್ಲಿ ಸಾಯುವಾಗ ಕಾಶಿ ಎನ್ನುವ ಎರಡು ಅಕ್ಷರಗಳೇ ಸಹಾಯಕವಾಗಿ ಪಾಪಿ ಮತ್ತು ಪುಣ್ಯಾತ್ಮರಿಗೆ ತಾರಕ ಮಂತ್ರ ಪ್ರಭಾವದಿಂದ ಮೋಕ್ಷ ಸಿಗುತ್ತದೆ. ಕೇವಲ ಪಾಪಿಗಳಿಗೆ ಭೈರವಿ ಯಾತನೆಗಳನ್ನು ಮಾತ್ರ ಸಹಿಸಬೇಕಾಗುತ್ತದೆ, ನರಕ ಯಾತನೆಯಿಂದ ದೂರವಿರುತ್ತಾರೆ" ಎಂದು ನಾರದನಿಗೆ ಸೂರ್ಯನಾರಾಯಣನು ತಿಳಿಸುತ್ತಾನೆ. ಇದರಿಂದ ನಾರದನು ಪ್ರಸನ್ನನಾಗಿ ತನ್ನ ಯಾತ್ರೆಯನ್ನು ಮುಂದುವರಿಸುತ್ತಾನೆ.

***

# ಐದನೇಯ ಅಧ್ಯಾಯ

ಹೇ ಮಹಾಋಷಿಗಳೇ! ಒಂದು ಕಾಲದಲ್ಲಿ ಕಾಶಿಯಲ್ಲಿ ಸುನಂದನ ಎಂಬ ರಾಜನ ವಿಶ್ವಪತಿ ಯಜ್ಞದಲ್ಲಿ ಸನತ್ಕುಮಾರನು ಕಾಶಿ ಮಹಾತ್ಮೆಯನ್ನು ವರ್ಣನೆ ಮಾಡುತ್ತಾನೆ. ಒಂದು ಕಾಲದಲ್ಲಿ ಯಮುನಾ ದಡದಲ್ಲಿ ಮೌನ ಎಂಬ ಋಷಿಗೆ ಮಾಂಡವ್ಯ ಮತ್ತು ಮುದ್ಗಲ ಎಂಬ ಶಿಷ್ಯರಿದ್ದರು. ಮಾಂಡವ್ಯ ಎಂಬುವನು ಬಲಿರಾಜನ ಯಜ್ಞದಲ್ಲಿ ಹೋಗಿ ಕಾಶಿ ಮಹಾತ್ಮೆಯನ್ನು ವರ್ಣಿಸಿ ಬಲಿರಾಜನ ಜೊತೆಗೆ ಕಾಶಿಗೆ ಬರುತ್ತಾನೆ. ಅದೇ ಸಮಯಕ್ಕೆ ಸರಿಯಾಗಿ ಮೌನ ಋಷಿ ಕೂಡ ಕಾಶಿಗೆ ಬರುತ್ತಾನೆ. ಮಾಂಡವ್ಯ ಮತ್ತು ಬಲಿಯು ಮೌನ ಋಷಿಯನ್ನು ನೋಡಿ ಪೂಜೆ ಮಾಡಿ ಮಣಿಕರ್ಣಿಕದಲ್ಲಿ ಸ್ನಾನ ಮಾಡಿ ವಿಶ್ವನಾಥನ ದರ್ಶನವನ್ನು ಮಾಡಿ ಕಾಶಿ ಮಹಾತ್ಮೆಯನ್ನು ಕೇಳುತ್ತಾರೆ. ಆಗ ಮೌನ ಋಷಿಯು ಮೋಕ್ಷಪ್ರದವಾದ ಕಾಶಿ ಮಹಾತ್ಮೆಯನ್ನು ಈ ರೀತಿಯಾಗಿ ವರ್ಣಿಸುತ್ತಾನೆ. "ಹೇ ಬಲರಾಜನೇ, ಯಾವ ಪುರುಷನು ಕಾಶಿಯಲ್ಲಿ ಧರ್ಮದಿಂದ ವಾಸಿಸುವನೋ ಅವನು ನಿಶ್ಚಯವಾಗಿ ಮೋಕ್ಷವನ್ನು ಪಡೆಯುತ್ತಾನೆ. ಯಾರು ಪಾಪ ಕರ್ಮಿಗಳಾಗಿರುತ್ತಾರೋ ಅವರು ಭೈರವಿ ಯಾತನೆಯನ್ನು ಪಡೆಯುತ್ತಾರೆ. ಇದನ್ನು ಕೇಳಿ ಬಲಿರಾಜನು ಶಿವಲಿಂಗವನ್ನು ಕಾಶಿಯಲ್ಲಿ ಸ್ಥಾಪಿಸಿ ತನ್ನ ನಿಜ ರಾಜ್ಯವನ್ನು ಸೇರಿದನು. ಕಾಶಿಯಲ್ಲಿ ದೇವದಾಸ ಎಂಬ ರಾಜನಿಗೆ ಪುತ್ರರಿಲ್ಲ ಎಂದು ರಾಣಿಯ ಜೊತೆ ಪುತ್ರನಿಗಾಗಿ ನಿಕುಂಭ ಮಹಾರಾಜನ ಸೇವೆಯನ್ನು ಒಂದು ವರ್ಷ ಕಾಲ ಮಾಡುತ್ತಾನೆ. ಆದರೂನು ಪುತ್ರನು ಸಿಗದಿರುವಾಗ ನಿಕುಂಭನ ಮಂದಿರವನ್ನು ಖಂಡಿಸುತ್ತಾನೆ. ಆಗ ನಿಕುಂಬನು ನಿನ್ನ ಈ ಅನ್ಯಾಯದಿಂದ ಕಾಶಿಯು ಶೂನ್ಯವಾಗಲಿ ಎಂದು ಶಪಿಸುತ್ತಾನೆ. ಬೆಳಗಾಗುತ್ತಲೇ ತಾಲಜಂಘ ಎಂಬ ರಾಜರು ದೇವಿದಾಸನನ್ನು ಸೈನ್ಯ ಸಮೇತ ಮುತ್ತಿಗೆ ಹಾಕಿ ಘೋರವಾಗಿ ಯುದ್ಧ ಮಾಡುತ್ತಾರೆ. ದೇವಿದಾಸನು ಸ್ತೋತು ಭಾರದ್ವಾಜ ಆಶ್ರಮವನ್ನು ಸೇರುತ್ತಾನೆ. ಆಮೇಲೆ ಇಬ್ಬರು ರಾಜರು ಕಾಶಿಯನ್ನು ಶೂನ್ಯ ಮಾಡುತ್ತಾರೆ. ದೇವಿದಾಸನು ಭಾರದ್ವಾಜನಲ್ಲಿ ಎಲ್ಲಾ ಕಥೆಯನ್ನು ಹೇಳುತ್ತಾನೆ. ಆಗ ಭಾರದ್ವಾಜನು ಕಾಶಿ ಮಹಾತ್ಮೆಯನ್ನು ವರ್ಣಿಸಿ ಪುತ್ರೇಷ್ಟಿ ಯಜ್ಞವನ್ನು ಮಾಡಿಸುತ್ತಾನೆ. ಆದ್ದರಿಂದ ಪ್ರದರ್ಶನ ಎಂಬ ಪುತ್ರನನ್ನು ಪಡೆದು, ತಾಲಜಂಘ ಎಂಬ ರಾಜರನ್ನು ಕೊಲ್ಲಿಸುತ್ತಾನೆ. ಆಗ ಒಂದು ಸಾವಿರ ವರುಷ ಕಾಶಿ ಶೂನ್ಯವಾಗಿರುತ್ತದೆ. ನಂತರ ದೇವಿದಾಸನು ಧರ್ಮದಿಂದ ಕಾಶಿಯಲ್ಲಿ ವಾಸಮಾಡಿ ಮೋಕ್ಷ ಪ್ರಾಪ್ತಿಯನ್ನು ಪಡೆಯುತ್ತಾನೆ.

***

# || ರುದ್ರಾಕ್ಷ ಮಹಾತ್ಮೆ ||

ಬಿನಾಭಸ್ಮ ತ್ರಿಪುಣ್ಡ್ರೇನ, ಬಿನಾರುದ್ರಾಕ್ಷಮಾಲಾಯಾರಿ |
ಬಿನಾ ಮಾಪುರಪತ್ರೇನ ನಾರ್ಚಯೇತ್ ಗಿರಿಜಾಪತಿಂ ||

ಸಮಸ್ತ ಜನರಿಗೆ ಮಾನ್ಯವಾದ ವಿವೇಕ ಚಿಂತಾಮಣಿ ಎಂಬ ಗ್ರಂಥದಲ್ಲಿ ಹೇಳಿದೆ. ರುದ್ರಾಕ್ಷಿಯ ಸೃಷ್ಠಿ ಮಾನವನ ಉದ್ಧಾರಕ್ಕಾಗಿ ಶಿವನ ನೇತ್ರ ಕಮಲದಿಂದ ಉತ್ಪತ್ತಿಯಾಗಿದೆ. ಇದರ ಮಹಿಮೆಯನ್ನು ಹೇಳುವುದು ಕಠಿಣ. ಕಾತ್ಯಾಯನ ಶಾಖಿ, ದಿವ್ಯಾಗಮ, ಶಿವರಹಸ್ಯ ಸ್ಕಂದ ಪುರಾಣ ಸಿದ್ಧಾಂತ ಶಿಖಾಮಣಿ ವೇದಾಗಮ ಧರ್ಮಗ್ರಂಥಗಳಲ್ಲಿ ರುದ್ರಾಕ್ಷ ಧಾರಣದ ಮಹತ್ವ ಮತ್ತು ವಿಧಾನ ಮತ್ತು ಫಲಗಳ ವರ್ಣನೆಗಳನ್ನು ವಿಸ್ತಾರವಾಗಿ ಹೇಳಿದ್ದಾರೆ. ಅದರ ಸಾರಾಂಶ ಈ ರೀತಿಯಾಗಿದೆ.

ಎಲ್ಲಾ ರುದ್ರಾಕ್ಷಿಯು ಅವನಿಂದಲೇ ಉತ್ಪತ್ತಿಯಾದರೂನು ಅವನ ಆಜ್ಞೆಯಿಂದ ಬೇರೆ ಬೇರೆ ರುದ್ರಾಕ್ಷಿಯು ಅಧಿಷ್ಠಾತ್ರಿ ದೇವತೆಗಳು ಬೇರೆ ಬೇರೆಯಾಗಿರುತ್ತಾರೆ.

## || ಏಕಮುಖಿ ರುದ್ರಾಕ್ಷಿ ||

ಏಕಮುಖಿ ರುದ್ರಾಕ್ಷಿಯ ಅಧಿದೇವಾ ಅಧಿಪತಿ ಸಾಕ್ಷಾತ್ ಶಿವನಾಗಿರುತ್ತಾನೆ. ಇದನ್ನು ಧಾರಣೆ ಮಾಡಿದರೆ ಬ್ರಹ್ಮಹತ್ಯಾದಂತಹ ಮಹಾಪಾಪಗಳು ಧ್ವಂಸವಾಗಿ ಸಮಸ್ತ ಸಿದ್ಧಿಗಳು ಪ್ರಾಪ್ತಿಯಾಗುತ್ತವೆ.

## || ದ್ವಿಮುಖಿ ರುದ್ರಾಕ್ಷಿ ||

ಎರಡು ಮುಖದ ರುದ್ರಾಕ್ಷಿಯು ಅಗ್ನಿಸ್ವರೂಪವಾಗಿದ್ದು ಇದರ ಅಧಿದೇವತೆ ಈಶ್ವರ ಹಾಗೂ ಈಶಾನನಾಗಿರುತ್ತಾನೆ. ಧಾರಣೆ ಮಾಡಿದರೆ ಹರಗೌರಿಯರು ಸದಾ ಸಂತುಷ್ಟರಾಗಿರುತ್ತಾರೆ. ಆಯು ದೀರ್ಘವಾಗುತ್ತದೆ, ಸಾಧನೆ ಸಿದ್ಧಿಯಾಗುತ್ತದೆ. ದೇವದರ್ಶನ ಮತ್ತು ಗೋಹತ್ಯಾ ಜನಿತವಾದ ಪಾಪದಿಂದ ಮುಕ್ತಿಯನ್ನು ಪಡೆಯುತ್ತಾರೆ.

## || ತ್ರಿಮುಖಿ ರುದ್ರಾಕ್ಷಿ ಅಗ್ನಿಸ್ವರೂಪ ||

ಮೂರು ಮುಖದ ರುದ್ರಾಕ್ಷಿಗೆ ದೇವತೆ ಅಗ್ನಿ ಧಾರಣೆಯಿಂದ ಸ್ತ್ರೀಹತ್ಯಾ ಪಾಪವನ್ನು ನಾಶಮಾಡುತ್ತದೆ.

|| ಚತುರ್ಮುಖ ರುದ್ರಾಕ್ಷಿ ಬ್ರಹ್ಮಸ್ವರೂಪ ||

ನಾಲ್ಕು ಮುಖದ ರುದ್ರಾಕ್ಷಿಯ ದೇವತೆ ಬ್ರಹ್ಮ ಇದನ್ನು ಧಾರಣೆ ಮಾಡಿದರೆ ಶ್ರೀ ವೃದ್ಧಿಯಾಗುತ್ತದೆ ಹಾಗೂ ಆರೋಗ್ಯವನ್ನು ಕೊಡುತ್ತದೆ. ಜ್ಞಾನ ವೃದ್ಧಿಯೂ ಆಗುತ್ತದೆ. ಮನಸ್ಸು ಪ್ರಸನ್ನವಾಗಿರುತ್ತದೆ. ನರಹತ್ಯಾ ಪಾಪವನ್ನು ನಾಶಮಾಡುತ್ತದೆ.

|| ಪಂಚಮುಖಿ ರುದ್ರಾಕ್ಷಿ ಸದಾಶಿವ ಸ್ವರೂಪ ||

ಪಂಚಮುಖಿ ರುದ್ರಾಕ್ಷಿಯ ಅಧಿದೇವತೆ ಸದಾಶಿವನಾಗಿರುತ್ತಾನೆ ಮತ್ತು ಧಾರಣೆಯಿಂದ ಅಭಕ್ಷ್ಯ ಭಕ್ಷಣ ಪಾಪವು ನಿವಾರಣೆಯಾಗುತ್ತದೆ.

|| ಷಣ್ಮುಖ ರುದ್ರಾಕ್ಷಿ ||

ಆರು ಮುಖದ ರುದ್ರಾಕ್ಷಿಯ ಅಧಿದೇವತೆ ಕಾರ್ತಿಕೇಯನಾಗಿರುತ್ತಾನೆ. ಧಾರಣೆಯಿಂದ ಗರ್ಭಹತ್ಯಾಪಾಪವು ನಾಶವಾಗುತ್ತದೆ. ಕಾರ್ತಿಕೇಯ ಅನುಗ್ರಹಫಲ ಸಿಗುತ್ತದೆ. ಧರ್ಮದಲ್ಲಿ ಮನಸ್ಸುಳ್ಳವರಾಗಿ ಮೋಕ್ಷ ಪ್ರಾಪ್ತಿಯಾಗುತ್ತದೆ.

|| ಸಪ್ತಮುಖಿ ರುದ್ರಾಕ್ಷಿ ||

ಏಳು ಮುಖದ ರುದ್ರಾಕ್ಷಿಯ ಅಧಿದೇವತೆ ಅನಂತನಾಗಿರುತ್ತಾನೆ. ಇದರ ಧಾರಣೆಯಿಂದ ಸುವರ್ಣ ಕ್ಲೇಶ ಜನಿತ ಪಾಪವು ನಾಶವಾಗಿ ದರಿದ್ರತೆಯೂ ನಾಶವಾಗುತ್ತದೆ.

|| ಅಷ್ಟಮುಖಿ ರುದ್ರಾಕ್ಷಿ ||

ಎಂಟು ಮುಖದ ರುದ್ರಾಕ್ಷಿಯ ಅಧಿದೇವತೆ ಗಣಪತಿ. ಧಾರಣೆಯಿಂದ ಸರ್ವದೋಷ ನಿವಾರಣೆಯಾಗಿ ಎಲ್ಲಾ ವಿಘ್ನಗಳು ಪರಿಹಾರವಾಗಿ ಪರಮಪದ ಪ್ರಾಪ್ತಿಯಾಗುತ್ತದೆ.

|| ನವಮುಖಿ ರುದ್ರಾಕ್ಷಿ ||

ಒಂಬತ್ತು ಮುಖದ ರುದ್ರಾಕ್ಷಿಯ ಅಧಿದೇವತೆ ಭೈರವ. ಧಾರಣೆಯಿಂದ ಎಲ್ಲಾ ಕ್ಲೇಶಗಳು ಧ್ವಂಸವಾಗಿ ಭಕ್ತಿ ಮುಕ್ತಿ ಪ್ರಾಪ್ತಿಯಾಗುತ್ತದೆ.

## || ದಶಮುಖಿ ರುದ್ರಾಕ್ಷಿ ||

ಹತ್ತು ಮುಖದ ರುದ್ರಾಕ್ಷಿಯ ಅಧಿದೇವತೆ ವಿಷ್ಣು. ಧಾರಣೆಯಿಂದ ಭೂತ ಪ್ರೇತ ಬೇತಾಲ ಮಾರ್ಗ ಗಣ ಬ್ರಹ್ಮರಾಕ್ಷಸಾದಿಗಳ ಭಯವು ನಾಶವಾಗುತ್ತದೆ.

## || ಏಕಾದಶಮುಖಿ ರುದ್ರಾಕ್ಷಿ ||

ಹನ್ನೊಂದು ಮುಖದ ರುದ್ರಾಕ್ಷಿಯ ಅಧಿದೇವತೆ ಏಕಾದಶ ರುದ್ರ. ಇದರ ಧಾರಣೆಯಿಂದ ಯಜ್ಞಫಲ ಪ್ರಾಪ್ತಿಯಾಗಿ ಸುಖ ಸಿಗುತ್ತದೆ.

## || ದ್ವಾದಶ ಮುಖಿ ರುದ್ರಾಕ್ಷಿ ||

ಹನ್ನೆರಡು ಮುಖದ ರುದ್ರಾಕ್ಷಿಯ ಅಧಿದೇವತೆ ದ್ವಾದಶಾದಿತ್ಯರು ಮತ್ತು ಅಗ್ನಿ. ಸರ್ವಬಾಧೆಗಳು ಪರಿಹಾರವಾಗಿ ವ್ಯವಹಾರಗಳು ಸಿದ್ಧಿಯಾಗಿ ಸುವರ್ಣ ಪ್ರಾಪ್ತಿಯಾಗುತ್ತದೆ.

## || ತ್ರಯೋದಶಮುಖಿ ರುದ್ರಾಕ್ಷಿ ||

ಹದಿಮೂರು ಮುಖದ ರುದ್ರಾಕ್ಷಿಯ ಅಧಿದೇವತೆ ಕಾಮಮಹೇಶ್ವರ. ಇದರ ಧಾರಣೆಯಿಂದ ಸಕಲ ಮನಸಾಭಿಷ್ಟವು ಸಿದ್ಧಿಯಾಗಿ ಕಲ್ಯಾಣ ಪ್ರಾಪ್ತಿಯಾಗುತ್ತದೆ.

## || ಚತುರ್ದಶಮುಖಿ ರುದ್ರಾಕ್ಷಿ ||

ಚತುರ್ದಶ ಮುಖಿ ರುದ್ರಾಕ್ಷಿಯ ಅಧಿದೇವತೆ ಚತುರ್ದಶಯುಕ್ತವಾಗಿರುತ್ತದೆ. ಧಾರಣ ಫಲ ಸಕಲ ಸಮ್ಮಾನಗಳು ಪ್ರಾಪ್ತಿಯಾಗಿ ಸುಖಪೂರ್ವಕ ಆಯುಷ್ಯ ವೃದ್ಧಿಯಾಗುತ್ತದೆ.

***

## || ಧಾರಣ ಮಂತ್ರಗಳು ||

||೧|| ಓಂ ಹ್ರೀಂ ನಮಃ || ೨ || ಓಂ ನಮಃ || ೩ || ಓಂ ಕ್ಲೀಂ ನಮಃ || ೪ || ಓಂ ಹ್ರೀಂ ನಮಃ ||೫|| ಓಂ ಹ್ರೀಂ ನಮಃ ||೬|| ಓಂ ಹ್ರೀಂ ಹುಂ ನಮಃ ||೭|| ಓಂ ಹುಂ ನಮಃ ||೮|| ಓಂ ಹುಂ ನಮಃ ||೯|| ಓಂ ಹ್ರೀಂ ಹುಂ ನಮಃ ||೧೦|| ಓಂ

ಹ್ರೀಂ ನಮಃ ||೧೧|| ಓಂ ಹ್ರೀಂ ಹುಂ ನಮಃ ||೧೨|| ಓಂ ಕ್ರಾಂ ಕ್ಷಾಂ ಕಾಂ ನಮಃ ||೧೩|| ಓಂ ಹ್ರೀಂ ನಮಃ ||೧೪|| ಓಂ ನಮಃ ||

ರುದ್ರಾಕ್ಷಿಯ ಮಾಲೆಯನ್ನು ಧಾರಣೆ ಮಾಡುವವರಿಗೆ ಭೂತ ಪ್ರೇತ ಪಿಶಾಚಿ ಡಾಕಿನಿ ಶಾಕಿನಿ ರಾಕ್ಷಸ ಆದಿಗಳ ಭಯವಿರುವುದಿಲ್ಲ ಮತ್ತು ಕೃತ್ರಿಮ ಅಭಿಚಾರಗಳು ದೂರವಾಗುತ್ತವೆ. ಅಲ್ಲದೆ ಡಾಕ್ಟರುಗಳ ವಿಚಾರದಂತೆ ಹೃದಯರೋಗ ವಿಕಾರಕ್ಕೆ ಲಾಭಪ್ರದವಾಗಿರುತ್ತದೆ.

***

## ಕಾಶಿ ಯಾತ್ರೆ

ಕಾಶಿ ಯಾತ್ರೆಯ ಅಂತರ್ಗತ ಅನೇಕ ಪರಂಪರೆಗಳು ಇದೆ. ಅಲ್ಲದೆ ಸೂಕ್ಷ್ಮ ಮತ್ತು ಸರಳ ನಿರ್ದೇಶನಗಳು ಪುರಾಣದಲ್ಲಿ ಹೇಳಲ್ಪಟ್ಟಿದೆ.

ಯಾತ್ರಾದ್ವಯಂ ಪ್ರಯತ್ನೇನ ಕರ್ತವ್ಯಂ ಪ್ರತಿವಾಸರಂ |
ಆದೌ ಸ್ವರ್ಗ ಅರಂಗಿಣ್ಯಾಂ ಸ್ನತೊ ವಿಶ್ವೇಶ ದರ್ಶನಮ್ ||

ಕಾಶಿ ವಾಸ ಮಾಡುವವರು ಪ್ರತಿದಿನ ಸ್ವರ್ಗತರಂಗಿಣಿ ಗಂಗೆಯಲ್ಲಿ ಸ್ನಾನ ಮತ್ತು ವಿಶ್ವೇಶ್ವರನ ದರ್ಶನ ಪೂಜೆಯನ್ನು ಅಗತ್ಯವಾಗಿ ಮಾಡಬೇಕು.

## ಕಾಶಿ ಮತ್ತು ವಾರಣಾಸಿ

ವಿಶ್ವೇಶ್ವರನ ಇಚ್ಛೆಯಿಲ್ಲದೆ ಜೀವಂತ ಪ್ರಾಣಿ ಏನು ಸತ್ತು ಹೋದ ಪ್ರಾಣಿಯ ಅಸ್ತಿ ಕೂಡ ಕಾಶಿ ಪ್ರಾಪ್ತಿಯಾಗಲು ಸಾಧ್ಯವಿಲ್ಲ. ಇನ್ನು ಗಂಗಾ ಪ್ರಾಪ್ತಿಯಾಗುವುದು ಅಸಾಧ್ಯ. ಅಗ್ನಿ ಮತ್ತು ವರುಣ ಸಂಗಮದಿಂದ ಕಾಶಿಯು ವಾರಣಾಸಿ ಎಂಬ ಹೆಸರಿನಿಂದ ಖ್ಯಾತಿಯನ್ನು ಪಡೆದಿದೆ.

## ಗಂಗಾ ಮಹಾತ್ಮೆ

ಗಂಗಾ ನದಿಯ ವಿಷಯದಲ್ಲಿ ಈ ರೀತಿ ವರ್ಣಿಸಿರುತ್ತಾರೆ.

ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ |
ಮುಚ್ಯತೆ ಸರ್ವ ಪಾಪೇಭ್ಯೋ ವಿಷ್ಣು ಲೋಕಂ ಸಗಚ್ಛತಿ ||

ಗಂಗೆಯಲ್ಲಿ ಸ್ನಾನ ಮಾಡುವುದಂತು ಇರಲಿ. ನೂರು ಯೋಜನೆ ದೂರದಿಂದಲಾದರೂ ಗಂಗಾ ಗಂಗಾ ಎಂದು ಹೇಳಿದರೂನು ಸರ್ವ ಪಾಪಗಳಿಂದಲೂ ಮುಕ್ತನಾಗಿ ವಿಷ್ಣು ಲೋಕವನ್ನು ಸೇರುತ್ತಾನೆ.

## ಯೇತ್ರಿ ಕಂಟಿಕ

ನಿತ್ಯ ಸಂಕಲ್ಪದಲ್ಲಿ ಅಂತರ್ಗತ ಅವಿಮುಕ್ತ ವಾರಣಾಸಿ ಕ್ಷೇತ್ರ ತ್ರಿಕಂಟಿಕ ವಿರಾಜಿತೆ ಎಂದು ಹೇಳುತ್ತಾರೆ. ಈ ತ್ರಿಕಂಟಿಕವನ್ನು ಹೀಗೆ ವಿವರಿಸುತ್ತಾರೆ.

ಅವಿಮುಕ್ತಂಚ ಸ್ವರ್ಲೀನಂ ತಥಾ ಮಧ್ಯಮೇಶ್ವರಮ್ ।
ಏತತ್ತ್ರಿಕಂಟಿಕಂ ದೇವಿ ಮೃತ್ಯುಕಾಲೆ ಮೃತಪದಮ್ ॥

## ಮಣಿಕರ್ಣಿಕಾ ಚಕ್ರ ಪುಷ್ಕರಣಿ

ಇದರ ವಿಷಯದಲ್ಲಿ ಕಥೆ ಹೀಗಿದೆ. ಒಂದಾನೊಂದು ಸಮಯ ಆನಂದವನ ಮಹಾಸ್ಮಶಾನದ ಹತ್ತಿರ ತಿರುಗಾಡುತ್ತಿರುವಾಗ ಶಿವ ಪಾರ್ವತಿಯರಿಗೆ ಮಹಾಪುರುಷನ ದರ್ಶನ ಮಾಡಬೇಕೆಂದು ಇಚ್ಛೆಯಾಯಿತು. ಹೀಗೆ ಯೋಚಿಸುತ್ತಾ ಶಿವನು ಪಾರ್ವತಿಯನ್ನು ತನ್ನ ಅಮೃತಮಯ ದೃಷ್ಟಿಯಿಂದ ನೋಡುತ್ತಾನೆ. ಆಗ ಶಿವನ ವಾಮಾಂಗದಿಂದ ತ್ರಿಭುವನ ಮೋಹನನಾದ, ಸುಂದರನೂ ಆದ ಒಬ್ಬ ಮಹಾಪುರುಷನು ಉತ್ಪತ್ತಿಯಾದನು. ಆ ಮಹಾಪುರುಷನಲ್ಲಿ ಶಿವನು, ಹೇ ಅಚ್ಯುತ, ವಿಷ್ಣು ವೇದಗಳು ನಿನ್ನ ಉಸಿರಾಗಿದೆ. ವೇದಗಳ ಅನುಸಾರ ಸಂಸಾರವನ್ನು ನಡೆಸುವುದು ನಿನ್ನ ಕೆಲಸ. ಅದೇ ಸಮಯದಲ್ಲಿ ಅಲ್ಲಿಯೇ ಅದೇ ಸ್ಥಾನದಲ್ಲಿ ಶಿವನಿಂದ ಆಜ್ಞೆಯನ್ನು ಪಡೆದು ತನ್ನ ಸುದರ್ಶನ ಚಕ್ರದಿಂದ ಭೂಮಿಯನ್ನು ಅಗೆದು ತನ್ನ ಬೆವರಿನಿಂದ ತುಂಬಿ ಒಂದು ಪುಷ್ಕರಣಿಯನ್ನು ಸೃಷ್ಟಿಸುತ್ತಾನೆ. ವಿಷ್ಣುವಿನ ಈ ಕಾರ್ಯದಿಂದ ಸದಾಶಿವನು ಸಂತೋಷಪಟ್ಟು, ಹೇ ಅಚ್ಯುತ, ನಿನ್ನ ಈ ಪುಣ್ಯಕಾರ್ಯದಿಂದ ನನ್ನ ಮಸ್ತಕದಲ್ಲಿ ಕಂಪನವಾಯಿತು. ನನ್ನ ಕಿವಿಯಲ್ಲಿ ಇರುವ ಮಣಿ ಬಿದ್ದು ಹೋಯಿತು. ಆದ್ದರಿಂದ ಈ ಚಕ್ರ ಪುಷ್ಕರಣಿಯು ಮಣಿಕರ್ಣಿಕಾ ಎಂಬ ಹೆಸರಿನಿಂದ ಪ್ರಖ್ಯಾತವಾಗುತ್ತದೆ. ಆಗ ವಿಷ್ಣುವು ನಿನ್ನ ಕಿವಿಮಣಿಯು ಕಿವಿಯಿಂದ ಮುಕ್ತಿಯನ್ನು ಪಡೆಯಿತು. ಆದ್ದರಿಂದ ಈ ಕ್ಷೇತ್ರವು ಅವಿಮುಕ್ತ ಕ್ಷೇತ್ರ ಎಂದು ಕರೆಯಲ್ಪಡುತ್ತದೆ ಎಂದು ಹೇಳುತ್ತಾನೆ.

ಚಕ್ರಪುಷ್ಕರಣಿ ತೀರ್ಥಂ ಸ್ನಾತಮಂ ಪ್ರತಿವಾಸರಮ್ |
ಪತ್ರೈಃ ಪುಷ್ಪೈಃ ಫಲೇಸ್ತೊಯೈಪೂಜ್ಯಃ ವಿಶ್ವೇಶ್ವರ ಸದಾ ||

ಎಲ್ಲಿಯವರೆಗೆ ಸಾಧ್ಯವಾಗುತ್ತದೋ ನಿತ್ಯ (ಮಣಿಕರ್ಣಿಕಾ) ಚಕ್ರಪುಷ್ಕರಣಿ ತೀರ್ಥದಲ್ಲಿ ಸ್ನಾನ ಮಾಡಿ ಗಂಗಾ ಜಲ ಬಿಲ್ವಪತ್ರ ಫಲಪುಷ್ಪಗಳಿಂದ ವಿಶ್ವೇಶ್ವರನ ಪೂಜೆ, ಅರ್ಚನೆ, ನಮಸ್ಕಾರಗಳನ್ನು ಮಾಡಿದರೆ ಸಂಪೂರ್ಣ ಕಾಶಿಯಾತ್ರೆ ಫಲಗಳನ್ನು ಪಡೆಯುತ್ತಾರೆ.

## ಕಾಶಿ ಯಾತ್ರಾ, ದೇವದರ್ಶನ ಮತ್ತು ಸ್ಥಾನ

ಕೇದಾರೇಶ್ವರ (ಕೇದಾರ ಘಾಟ್) ಓಂಕಾರೇಶ್ವರ ಮಚ್ಛೋದರಿ ಪಾರ್ಕ್‌ನಿಂದ ಉತ್ತರಕ್ಕಿದೆ. ವೈದ್ಯನಾಥೇಶ್ವರ ಕಮಚ್ಛದಲ್ಲಿ ಇದೆ. ಘೃಷ್ಣೇಶ್ವರ ರೆಪಡಿ ಸರೋವರದಲ್ಲಿ, ನಾಗೇಶ್ವರ ಭೊಸ್ಲಾ ಘಾಟ್‌ನಲ್ಲಿ, ಮಹಾಕಾಲೇಶ್ವರ ವೃದ್ಧ ಕಾಲದಲ್ಲಿ, ಬಾಗೇಶ್ವರ ಕಾಶಿಕರ್ ವಟದ ಹತ್ತಿರ, ತ್ರ್ಯಯಂಬಕೇಶ್ವರ ಹೌಚ್‌ಕಟೋರಾದಲ್ಲಿ, ಶೈಲೇಶ್ವರ ಮಾಚಿಯಾಘಾಟ್‌ನಲ್ಲಿ, ಗೋಕರ್ಣೇಶ್ವರ ಕೋದಾಯಿ ಚೌಕ್‌ನಲ್ಲಿ, ರಾಮೇಶ್ವರ ಮಾನಮಂದಿರದಲ್ಲಿ ವಿಶ್ವೇಶ್ವರ ಪ್ರಸಿದ್ಧವಾಗಿದೆ.

## ಸಪ್ತಪುರಿ ಯಾತ್ರೆ

ಅಯೋಧ್ಯಾ (ರಾಮೇಶ್ವರ ಪಂಚಕೋಶಿ ದಾರಿಯಲ್ಲಿ) ಮಥುರಾ (ನಕ್ಕಿಘಾಟಿನಲ್ಲಿ), ಕಾಶಿ (ಲಲಿತಾ ಘಾಟ್), ವಿಷ್ಣುಕಾಂಚಿ (ಪಂಚಗಂಗಾ), ಅವಂತಿಕಾ (ವೃದ್ಧಕಾಲ), ದ್ವಾರಿಕಾ (ಸಂಕುಲಧಾರಾ), ಮಾಯಾ (ಸಂಗಮೇಶ್ವರ ರಾಣಿ ಸುರಸರದ ಮಂದಿರದ ಹತ್ತಿರ ಲೋಕಾರ್ಕ ಭರ್ಕನಿ)

## ಪಂಚತೀರ್ಥ ಯಾತ್ರೆ

ಪ್ರಥಮಂಚಾಸಿಸಂಭೇದಂ ತೀರ್ಥಾನಾಂ ಪ್ರವರಂಪರಮ್ |
ತತೋ ದಶಾಶ್ವಮೇಧಾರವ್ಯಂ ಸರ್ವತೀರ್ಗ ನಿಸೇವಿತಮ್ ||
ತತೋ ಪಾದೋದರ್ಕಾಂ ತೀರ್ಥ ಮಾದಿಕೇಶವ ಸನ್ನಿಧೌ |

ತತಃ ಪಂಚನದಃ ಪುಣ್ಯಃ ಸ್ನಾನಮಾತ್ರ ದಘೌಘಹೃತ್ |
ಪಂಚಮ ಮಣಿಕರ್ಣಿಕಾಖ್ಯಂ ಮನೋವಾಕ್ಕಾಯ ಶುದ್ಧಿ ತಮ್ ||

ಮೊದಲನೆಯದಾಗಿ ಅಸ್ಸಿ ಸಂಗಮದಲ್ಲಿ ಸ್ನಾನ ಮಾಡಿ ಪೂಜೆ ಮಾಡಿದ ಮೇಲೆ ಅಸೊಮಾಧವ, (ತ್ರಿವಿಕ್ರಮ) ತುಲಸಿ ಘಾಟ್, ಸಂಗಮೇಶ್ವರ, ಲೋಲಾರ್ಕದ ದರ್ಶನ ಪೂಜೆ ಮಾಡಿ ದಶಾಶ್ವಮೇಧಕ್ಕೆ ಬರಬೇಕು. ಎರಡನೆಯದಾಗಿ ದಶಾಶ್ವಮೇಧದಲ್ಲಿ ಸ್ನಾನ ಮಾಡಿ ದಶಾಶ್ವೇಶ್ವರ (ಶೀತಲಾಜಿಯಲ್ಲಿ) ದರ್ಶನ ಮಾಡಬೇಕು. ನಂತರ ಬದ್ರಿ ದೇವಿ, ವಿಶ್ವನಾಥನ ಪಂಡನ ಮನೆಯಲ್ಲಿ ಮಲಗಿ ಅಲ್ಲಿಯೇ ಶೂಲಠಂಕೇಶ್ವರ, ವಾರಾಹೇಶ್ವರಕ್ಕಾಗಿ ಸೋಮೇಶ್ವರ, ದಾಲಭೇಶ್ವರ, ಪ್ರಯಾಗ ಮಾಧವಕರ್ (ಮಾನ ಮಂದಿರದಲ್ಲಿ) ದರ್ಶನ ಮಾಡಬೇಕು. ಅನಂತರ ವರುಣ ತೀರ್ಥ ಸ್ನಾನ ಪೂಜೆ ಮುಗಿಸಿಕೊಂಡು ಆದಿಕೇಶವ ಸಂಗಮೇಶ್ವರ (ಆದಿಕೇಶವ ಮಂದಿರದ ಕೆಳಗಡೆ ಕೇಶವಾದಿತ್ಯ, ಶ್ವೇತದೀತ, ಜ್ಞಾನಕೇಶವ, ನಂದನತ್ರೇಶ್ವರ, ವೇದೇಶ್ವರಕ್ಕಾಗಿ ಆದಿ ಕೇಶವ ದ್ವಾರದವರೇಗೆ ಪುನಃ ಬರಬೇಕು. ಅಲ್ಲಿಂದ ತ್ರಿಲೋಚನ ಘಾಟ್ ತ್ರಿವಿಷ್ಟಪ ತೀರ್ಥದಲ್ಲಿ ಪ್ರೋಕ್ಷಣೆ ಮಾಡಿಕೊಂಡು (ತ್ರಿವಿಷ್ಟಪ) ತ್ರಿಲೋಚನ ಮಹಾದೇವನ ದರ್ಶನ ಪೂಜೆ ಮಾಡಿದ ಮೇಲೆ ಪಂಚಗಂಗಾ ಸ್ನಾನ ಮಾಡಬೇಕು. ಬಿಂದು ಮಾಧವ ಗೌರಿಗೋಮಟೇಶ್ವರ, ಮಂಗಲಗೌರಿಗಾಗಿ ಘಾಟ್ ಬದಿಯಿಂದಲೇ ಮಣಿಕರ್ಣಿಕ ತೀರ್ಥಕ್ಕೆ ಬರಬೇಕು. ಅಲ್ಲಿ ಸ್ನಾನ ಮಾಡಿ ತೀರ್ಥ ಪೂಜೆ ಮಾಡಬೇಕು. ಅಲ್ಲಿಯೇ ಸಿದ್ಧಿವಿನಾಯಕ ಮಣಿಕರ್ಣಿಕೇಶ್ವರನ ಪೂಜೆ ದರ್ಶನಗಳನ್ನು ಮಾಡಿದ ಮೇಲೆ ವಿಶ್ವೇಶ್ವರ, ಮಾತಾ ಅನ್ನಪೂರ್ಣಾ, ದುಂಡಿರಾಜ, ದಂಡಪಾಣಿಯ ದರ್ಶನ ಪೂಜೆ ಮಾಡಿ ಅಲ್ಲಿಂದ ಮುಕ್ತಿಮಂಟಪ (ಜ್ಞಾನವ್ಯಾಪಿ)ಯಲ್ಲಿ ಸ್ನಾನ ದರ್ಶನ ಪೂಜೆ ಮಾಡಿ ಪಂಚಗಂಗಾ ತೀರ್ಥ ಯಾತ್ರೆಯನ್ನು ಸಮಾಪ್ತಿ ಮಾಡಬೇಕು.

## ಪಂಚಕೋಶಿ ಯಾತ್ರೆ

ಕಾಶಿ ಅನಾದಿಯಿಂದಲೇ ಶಿವನ ಪ್ರೀತಿಯ ನಗರವಾಗಿದೆ. ಶಿವನ ಗಣದೇವತೆಗಳು, ಅನ್ಯ ಹಲವಾರು ದೇವತೆಗಳು ಇಲ್ಲಿ ವಾಸವಾಗಿರುತ್ತಾರೆ. ಇವರುಗಳ ಪೂಜೆ, ದರ್ಶನ ಮಾಡುವಾಗ ಯಾತ್ರಿಕರಿಗೆ ಅನೇಕ ತರದ ಅನಾನುಕೂಲಗಳು ಉಂಟಾಗುತ್ತವೆ. ಆದ್ದರಿಂದ ಮಹರ್ಷಿ ವೇದವ್ಯಾಸನು ಕಾಶಿಯ ಗಡಿಪ್ರದೇಶಗಳನ್ನು ನಿರ್ಧರಿಸಿ ಎಲ್ಲಾ ದೇವಿ ದೇವತೆಗಳನ್ನು ಅನೇಕ ವಿಧಿಗಳನ್ನು ಬೇರೆ ಬೇರೆ

ತಿಳಿಸಿರುತ್ತಾನೆ. ಅಂದರೆ ಐವತ್ತಾರು ವಿನಾಯಕರು, ಹನ್ನೆರಡು ಆದಿತ್ಯರು, ಎಂಟು ಭೈರವರು, ಪಂಚಕೋಶಿ ಅಂತರ್ಗತ ನಾಲ್ಕು ಧಾಮ ಸಪ್ತಪುರಿ ಇತ್ಯಾದಿ ಸ್ಕಂದ ಪುರಾಣದಲ್ಲಿ ಬರೆದು, ಶಿಷ್ಯರಿಗೆ ಬೋಧನೆ ಮಾಡಿರುತ್ತಾನೆ. ಈ ದಸಹಭೇದಗಳನ್ನು ತನ್ನ ಪ್ರಧಾನ ಶಿಷ್ಯನಿಗೆ ಪ್ರಚಾರಕ್ಕಾಗಿ ದೀಕ್ಷೆಯನ್ನು ಕೊಡುತ್ತಾನೆ. ಈ ಶಿಷ್ಯನ ಕೈಯಿಂದ ಸ್ಥಾಪಿಸಲ್ಪಟ್ಟ ಪೀಠವು ಜ್ಞಾನವ್ಯಾಪಿಯಲ್ಲಿರುವ ಮುಕ್ತಿ ಮಂಡಲದಲ್ಲಿ ಇದೆ. ಅದೇ ಪರಂಪರೆಯಲ್ಲಿ ಬಂದಿರುವ ಆಚಾರ್ಯಗುರುಗಳು ಇಂದಿಗೂ ಇದೇ ಪೀಠದಿಂದ ಪ್ರಾರಂಭ ಮಾಡುತ್ತಾರೆ. ಹಲವಾರು ಕಾಶಿವಾಸಿಗಳು ಪ್ರತೀ ವರ್ಷ ಈ ಯಾತ್ರೆಯನ್ನು ಮಾಡುತ್ತಾರೆ. ಉತ್ತರಪ್ರದೇಶ ಹಾಗೂ ಇತರ ಪ್ರದೇಶಗಳ ಯಾತ್ರಿಕರುಗಳು ಕೂಡಾ ಅಧಿಕ ಮಾಸ ಶಿವರಾತ್ರಿಗಳಲ್ಲಿ ಆದಿ ವಿಶೇಷ ದಿನಗಳಲ್ಲಿ ಈ ಯಾತ್ರೆಯನ್ನು ಮಾಡುತ್ತಾರೆ. ಈಸಮಯದಲ್ಲಿ ಪಂಡಿತ್ ಚಂದ್ರನಾಥರು ಮಾಡಿಸುತ್ತಾರೆ. ಈ ಯಾತ್ರೆಯನ್ನು ವರುಷದಲ್ಲಿ ಎರಡು ಸಲ ಮಾಡಬೇಕು.

ಈ ಪಂಚಕೋಶಿ ಯಾತ್ರೆಯು ಜ್ಞಾನವ್ಯಾಪಿಯಿಂದ ಪ್ರಾರಂಭವಾಗಿ ಅಲ್ಲಿಯೇ ಕೊನೆಗೊಳ್ಳಬೇಕು. ಶುದ್ಧ ಮನಸ್ಸಿನಿಂದ ಕಾಶಿ ಪರಿಕ್ರಮವನ್ನು ಮಾಡಿದರೆ ಅದರ ಫಲವು ಅಗತ್ಯ ಸಿಕ್ಕೇ ಸಿಗುತ್ತದೆ. ಅಲ್ಲಿಯ ಸನಾತನವಾದ ಜ್ಯೋತಿ ಸ್ವರೂಪವಾದ ಪಂಚಕೋಶಿ ಲಿಂಗದ ದರ್ಶನ ಮಾತ್ರದಿಂದಲೇ ಬ್ರಹ್ಮಹತ್ಯಾ ಮೊದಲಾದ ಮಹಾ ಪಾಪಗಳು ನಾಶವಾಗುತ್ತವೆ. ಇಲ್ಲಿ ಲಕ್ಷ್ಮಿಯ ಜೊತೆ ವಿಷ್ಣು, ಭವಾನಿ ಜೊತೆ ಶಂಕರ, ದುಂಢಿರಾಜ, ಆದಿ ಐವತ್ತಾರು ಗಣೇಶ, ಹದಿಮೂರು ನರಸಿಂಹ, ಹದಿನಾರು ಕೇಶವ, ರಾಮ, ಕೃಷ್ಣನ ಅನೇಕ ಅವತಾರಗಳ ಆರು ದೇವಿಯರ ಮೂರ್ತಿಗಳು ಇವೆ. ಇವರುಗಳ ದರ್ಶನವನ್ನು ಮಾಡಿ ಪುಣ್ಯ ಫಲವನ್ನು ಸಂಪಾದಿಸಬೇಕು.

ಈ ಯಾತ್ರೆ ಕಡಿಮೆ ಪಕ್ಷ ಐವತ್ತು ಮೈಲಿ ವಿಸ್ತೀರ್ಣವಾಗುತ್ತದೆ. ಯಾತ್ರೆ ಮಾಡುವಾಗ ವಿಶ್ವೇಶ್ವರನನ್ನು ಈ ರೀತಿ ಪ್ರಾರ್ಥಿಸಬೇಕು.

ಪಂಚಕ್ರೋಶಸ್ಯ ಯಾತ್ರಾವೈ ಕರಿಷ್ಯೆ ವಿಧಿಪೂರ್ವಕಮ್ |
ಪ್ರೀತ್ಯರ್ಥಂ ತವದೇವೇಶ ಸರ್ವಾಘೌಘ ಪ್ರಶಾಂತಯೇ ||

ಆಮೇಲೆ ಕರ್ದಮೇಶ್ವರ (ಕರಮೈತಪುರ) ಹಳ್ಳಿಗೆ ಹೋಗಿ ಕರ್ದಮೇಶ್ವರನ ದರ್ಶನ ಪೂಜೆ ಮಾಡಿ ಮರುದಿನ ಯಾತ್ರೆಯನ್ನು ಮುಂದುವರಿಸಬೇಕು. ಹಾಗೂ ಈ ರೀತಿ ಪ್ರಾರ್ಥನೆ ಮಾಡಬೇಕು.

ಕರ್ದಮೇಶ ಮಹಾದೇಶ ಕಾಶೀವಾಸಿ ಜನಪ್ರಿಯ |
ತ್ವತ್‌ಪೂಜಾವಾನ್ ಮಹಾದೇವ ಪುನರ್ದರ್ಶನ ನಮೋಸ್ತುತೇ ||

*ಎರಡನೇ ದಿನ ಕರ್ದಮೇಶ್ವರದಿಂದ ಭೀಮ ಚಂಡಿ ದೇವಿ*

(ಜಕ್ಕನೀ ತಾಲಕಾದಲ್ಲಿ) ಭೀಮಚಂಡಿ ದೇವಿಯ ದರ್ಶನ ಪೂಜೆ ಮಾಡಿ ರಾತ್ರಿ ವಿಶ್ರಾಮ ಮಾಡಬೇಕು. ಮರುದಿವಸ ದೇವಿಯನ್ನು ಪ್ರಾರ್ಥಿಸಬೇಕು.

ಭೀಮಚಂಡಿ ಪ್ರಚಂಡಾನಿ ಶಮ ವಿಘ್ನಾನಿ ನಾಶನಮ್ |
ನಮಸ್ತೆ ಗಮಿಷ್ಯಾಮಿ ಪುನರ್ದರ್ಶನ ನಮೋಸ್ತುತೇ ||

*ಮೂರನೇ ದಿನ ಭೀಮಚಂಡಿಯಿಂದ ರಾಮೇಶ್ವರ*

ಮುಂದೆ (ಶ್ರೀ ಧಾಮಪುರ ಎಂಬ ಹಳ್ಳಿಯಲ್ಲಿ) ವರುಣ ನದಿ ಸ್ನಾನ. ಶ್ರೀ ರಾಮೇಶ್ವರನ ದರ್ಶನ ಪೂಜೆ ರಾತ್ರಿಯಲ್ಲಿ ಇದ್ದು ಬೆಳಿಗ್ಗೆ ಹೊರಡುವಾಗ ರಾಮೇಶ್ವರನನ್ನು ಪ್ರಾರ್ಥಿಸಬೇಕು.

ಶ್ರೀ ರಾಮೇಶ್ವರ ರಾಮೇಣ ಪೂಜಿತಸ್ತ್ವಂ ಸನಾತನ |
ಆಜ್ಞಾನಿ ದೇಹಿ ಮಹಾದೇವ ಪುನರ್ದರ್ಶನ ನಮೋಸ್ತುತೇ ||

*ನಾಲ್ಕನೇ ದಿನ ರಾಮೇಶ್ವರದಿಂದ ಶಿವಪುರ*

ಶಿವಪುರದಲ್ಲಿ ಒಂದು ದ್ರೌಪದಿ ಕುಂಡದಲ್ಲಿ ಸ್ನಾನ ಮಾಡಿ ಪಂಚಪಾಂಡವರ ದರ್ಶನ ಪೂಜೆ ಮಾಡಿ ರಾತ್ರಿ ಅಲ್ಲಿಯೇ ಉಳಕೊಂಡು (ಇಲ್ಲಿ ಶಾಸ್ತ್ರ ರೀತಿಯಿಂದ ಉಳಿದುಕೊಳ್ಳುವ ಕ್ರಮವಿಲ್ಲ). ಆದರೆ ಲೌಕಿಕ ರೀತಿಯ ಕ್ರಮವಿದೆ. ಬೆಳಿಗ್ಗೆ ಹೊರಡುವಾಗ ಈ ಕೆಳಗಿನ ರೀತಿ ಪ್ರಾರ್ಥಿಸಬೇಕು.

ಪಂಚ ಪಾಂಡವ ನೀರಾಖ್ಯ ಭಾರತೇಧರ್ಮ ನೀತಿವಾನ್ |
ತ್ವಪ್ರಸಾದಾನಾಭಿಷ್ಯಾಮಿ ಪುನರ್ದರ್ಶನ ನಮೋಸ್ತುತೇ ||

*ಐದನೇ ದಿನ ಶಿವಪುರಿಯಿಂದ ಕಪಿಲಧಾರಾ ||*

ಇದು ಶಿವಗಯ ಎಂದು ಹೇಳಲ್ಪಡುತ್ತದೆ. ಹೆಚ್ಚಾಗಿ ಹೊರಗಿನಿಂದ ಬರುವ ಯಾತ್ರಿಕರು ಇಲ್ಲಿ ಪಿಂಡ ದಾನಾದಿಗಳನ್ನು ಕೂಡಾ ಮಾಡುತ್ತಾರೆ. ಅಲ್ಲಿಯ

ಸ್ಥಾನೀಯರು ಪಿತೃ ಪಕ್ಷದಲ್ಲಿ ದರ್ಶಶ್ರಾದ್ಧ, ಅಮಾವಾಸ್ಯೆಗಳಲ್ಲಿ ಪಿಂಡದಾನಾದಿಗಳನ್ನು ಮಾಡುತ್ತಾರೆ. ಇಲ್ಲಿ ವೃಷಭ ಧ್ವಜ ಕುಂಡ ಮತ್ತು ವೃಷಭ ಧ್ವಜ ಮಹಾದೇವನ ಲಿಂಗವಿದೆ. ಇಲ್ಲಿ ದರ್ಶನ ಪೂಜೆ ಮುಗಿಸಿ ಅಲ್ಲಿಯೇ ನಿದ್ರಿಸಬೇಕು. ಮರುದಿವಸ ಹೊರಡುವಾಗ ಪ್ರಾರ್ಥಿಸುವುದು.

ವೃಷಭ ಧ್ವಜ ದೇವೇಶ ಪಿತೄಣಾಂ ಮುಕ್ತಿದಾಯಕ |
ಆಜ್ಞಾಂದೇಹಿ ಮಹಾದೇವ ಪುನರ್ದರ್ಶನ ನಮೋಸ್ತುತೇ ||

*ಆರನೇ ದಿನ ಕಪಿಲ ಧಾರಾದಿಂದ ಮನೆಗೆ*

ಹಿಂದಿರುಗಿ ಬಂದು ಯಾತ್ರೆಗೆ ವಿಶ್ರಾಂತಿಯನ್ನು ಕೊಡುವುದು. ಬರುವಾಗ ಪುನಃ ಮಣಿಕರ್ಣಿಕಾಸ್ನಾನ, ವಿಶ್ವೇಶ್ವರನ ದರ್ಶನ ಮಾಡುತ್ತಾ (ಮುಕ್ತಿ ಮಂಟಪ) ಜ್ಞಾನವ್ಯಾಪಿಗೆ ಬರಬೇಕು. ಇಲ್ಲಿ ಕೈಯಲ್ಲಿ ಅಕ್ಷತೆ ಕಾಳನ್ನು ಹಿಡಿದು ಈ ಕೆಳಗಿನ ಮಂತ್ರದಿಂದ ಪ್ರಾರ್ಥಿಸುತ್ತಾ ಭೂಮಿಯಲ್ಲಿ ಹಾಕಬೇಕು. ಆಮೇಲೆ ಮನೆಗೆ ಬಂದು ಸಂಪೂರ್ಣ ಸಾಂಗತಾ ಫಲಪ್ರಾಪ್ತಿಗಾಗಿ ಬ್ರಾಹ್ಮಣ ಭೋಜನವನ್ನು ಮಾಡಬೇಕು.

ಪಂಚಕ್ರೋಶಸ್ಯ ಯಾತ್ರೇದ್ ಯಥಾ ಪ್ರೋಕ್ತಾಮಯಾಕೃತಾ |
ನ್ಯೂನಂ ಸಂಪೂರ್ಣತಾಂ ಯಾಂತು ತ್ವಪ್ರಸಾದಾದುಮಾಪತೇ ||

## ವಿಶ್ವನಾಥ ಮಂದಿರ

ಕಾಶಿ ವಿಶ್ವನಾಥನ ಪುರಾತನ ದೇವಾಲಯವನ್ನು ಔರಂಗಜೇಬನು ಒಡೆದು ಕೆಡವಿದ್ದಾನೆ. ಈಗ ಇರುವ ದೇವಾಲಯವನ್ನು ಇಂದೌರ್‌ನ ಮಹಾರಾಣಿ ಅಹಲ್ಯಾ ಬಾಯಿ ಕಟ್ಟಿಸಿದಳು. ಗುಡಿಯಲ್ಲಿ ಪಂಜಾಬ್‌ನ ಕೇಸರಿ ರಣಜಿತ್ ಸಿಂಹನು ಬಂಗಾರದ ತಗಡನ್ನು ತಗಲಿಸಿದನು. ಗುಡಿಯು ಐವತ್ತೊಂದು ಫೀಟ್ ಎತ್ತರವಿದೆ. ಗರ್ಭಗುಡಿಯಲ್ಲಿ ನಾಲ್ಕು ಮೂಲೆಯ ಕುಂಡವಿದೆ. ಇಲ್ಲಿ ವಿಶ್ವನಾಥನ ಜ್ಯೋತಿರ್ಲಿಂಗವಿದೆ. ಇಲ್ಲಿಯ ವೈಶಿಷ್ಟ್ಯ ಸಿದ್ಧ ಸ್ಥಾನವಾಗಿದೆ. ನಾಟ್ಯಮಂದಿರದಲ್ಲಿ ನೇಪಾಳ ರಾಜನಿಂದ ಅರ್ಪಿಸಲ್ಪಟ್ಟ ಒಂದು ದೊಡ್ಡ ಗಂಟಾಮಣಿ ನೇತಾಡುತ್ತಿದೆ. ಇದರ ಸ್ವರವು ಬಹಳ ದೂರದವರೆಗೂ ಕೇಳಿ ಬರುತ್ತದೆ.

ದೇವಳದ ಒಳಗಡೆ ನೆಲದಲ್ಲಿ ಬೆಳ್ಳಿಯ ರೂಪಾಯಿ ನಾಣ್ಯಗಳನ್ನು ಅಲ್ಲಲ್ಲಿ ಹಚ್ಚಿದ್ದಾರೆ. ಬೆಳಿಗ್ಗೆ ಮಧ್ಯಾಹ್ನ ಸಂಜೆ ಹೀಗೆ ಮೂರು ಸಲ ವಿಶ್ವನಾಥನಿಗೆ

ಮಹಾಪೂಜೆ, ಮಂಗಳಾರತಿಗಳನ್ನು ಮಾಡುತ್ತಾರೆ. ಈ ಸಮಯದಲ್ಲಿ ಭಕ್ತರು ಆನಂದ ಶಾಂತಿಯನ್ನು ಪಡೆಯುತ್ತಾರೆ. ಶ್ರಾವಣ ತಿಂಗಳಿನಲ್ಲಿ ಇಲ್ಲಿ ಭಕ್ತಾದಿಗಳನ್ನು ನಿಯಂತ್ರಣ ಮಾಡುವುದು ಕಷ್ಟಸಾಧ್ಯವಾಗುತ್ತದೆ. ಇದು ಏಕಾದಶ ಹನ್ನೊಂದು ಜ್ಯೋತಿರ್ಲಿಂಗದಲ್ಲಿ ಒಂದಾಗಿರುವುದರಿಂದ ತುಂಬಾ ಮಹತ್ವವನ್ನು ಪಡೆದಿದೆ. ಜ್ಞಾನವ್ಯಾಪಿ ವಿಶ್ವನಾಥನ ಗುಡಿಯಿಂದ ಉತ್ತರಕ್ಕಿದ್ದು, ಇದು ತುಂಬಾ ಪವಿತ್ರವಾದ ಸ್ಥಳವಾಗಿದೆ. ಇಲ್ಲಿ ಪುರಾತನ ವಿಶ್ವನಾಥನ ಗುಡಿಯ ಅವಶೇಷಗಳು ಇದೆ. ಇದನ್ನೇ ಔರಂಗಜೇಬನು ಒಡೆದುಬಿಟ್ಟು ಮಸೀದಿಯನ್ನು ಕಟ್ಟಿಸಿದನು. ಇಲ್ಲಿ ಒಂದು ಬಾವಿಯಿದೆ. ಅದರಲ್ಲಿ ಶಿವಲಿಂಗವನ್ನು ಸುರಕ್ಷಿತವಾಗಿ ಇಟ್ಟಿದ್ದಾರೆ. ಶಿವಭಕ್ತರು ಈ ಸ್ಥಾನವನ್ನು ತುಂಬಾ ಪವಿತ್ರಸ್ಥಾನವೆಂದು ನಂಬಿದ್ದಾರೆ. ಈ ಬಾವಿಯ ನೀರನ್ನು ಕುಡಿದು ಧನ್ಯರೆಂದು ಭಾವಿಸುತ್ತಾರೆ. ಇದರ ಹತ್ತಿರ ವಿಶಾಲವಾದ ನಂದಿ ಇದೆ. ಇದು ವಿಶ್ವನಾಥನ ವಾಹನವಾಗಿದೆ.

## ಕಾಶಿಯ ಇತರ ದರ್ಶನೀಯ ಸ್ಥಾನಗಳು

ಡುಂಡಿ ರಾಜ ಗಣೇಶ (ಇವನು ಕಾಶಿ ಕ್ಷೇತ್ರಕ್ಕೆ ರಕ್ಷಕನಾಗಿರುತ್ತಾನೆ) ವಿಗ್ರಹವು ವಿಶ್ವನಾಥ ಗುಡಿಯ ಸಿಂಹದ್ವಾರದ ಪಕ್ಕದಲ್ಲಿದೆ. ಇವನ ದರ್ಶನ ಪೂಜೆಯನ್ನು ಮಾಡದೆ ಕಾಶಿಯಾತ್ರೆಯ ಫಲವನ್ನು ಪಡೆಯಲಾಗುವುದಿಲ್ಲ.

ಅನ್ನಪೂರ್ಣ ಮಂದಿರ : ಮಂದಿರದ ಒಳಗಡೆ ನಾನಾ ರತ್ನವನ್ನು ತೊಟ್ಟಿರುವ ಅನ್ನಪೂರ್ಣಾದೇವಿಯ ಸುಂದರ ವಿಗ್ರಹವಿದೆ. ಗುಡಿಯ ನಾಲ್ಕು ದಿಕ್ಕಿಗೆ ಗೌರಿಶಂಕರ, ಸೂರ್ಯ, ಗಣಪತಿ ಮತ್ತು ಹನುಮಂತನ ವಿಗ್ರಹಗಳಿವೆ. ಶನಿ ಮೂರ್ತಿ, ಅಭಿಮುಕ್ತೇಶ್ವರ, ಶಿವಸಭಾ, ಜ್ಞಾನವ್ಯಾಪಿ ಅಥವಾ ಜ್ಞಾನಕುಂಡ (ರುದ್ರರೂಪಿ ಶಿವನು ತನ್ನ ತ್ರಿಶೂಲದಿಂದ ಈ ಕುಂಡವನ್ನು ನಿರ್ಮಿಸಿರುತ್ತಾನೆ ಎಂದು ಪುರಾಣಗಳು ಹೇಳುತ್ತವೆ). ಈ ತೀರ್ಥವನ್ನು ಕುಡಿಯುವುದರಿಂದ ಜ್ಞಾನ ಪ್ರಾಪ್ತಿಯಾಗುತ್ತದೆ.

ಅಕ್ಷಯ್ಯವಟ, ವಿಶ್ವೇಶ್ವರನ ಅನಾದಿಕಾಲದ ಪ್ರಾಚೀನ ಮಂದಿರ. ಕಾಶಿ ಕರವಟ, ತಾರಕೇಶ್ವರ, ವಿಷ್ಣುವಿನ ಚರಣ ಚಿಹ್ನೆ, ಮಣಿಕರ್ಣಿಕಾ (ಶಿವನು ಸತಿಯ ಮೃತದೇಹವನ್ನು ಹೆಗಲಿಗೆ ಹಾಕಿಕೊಂಡು, ಉನ್ಮತ್ತನಾಗಿ ಸುತ್ತುತ್ತಿರುವಾಗ ಸತಿಯ ಕಿವಿಯಿಂದ ಮಣಿಯಿಂದ ಸೇರಿದ ಕುಂಡಲವು ಈ ಪ್ರದೇಶದಲ್ಲಿ ಬಿದ್ದಿರುವುದೆಂದು ಈ ಭಾಗಕ್ಕೆ ಮಣಿಕರ್ಣಿಕಾ ಎಂಬ ಹೆಸರು ಬಂತು ಎಂದು ಹೇಳುತ್ತಾರೆ.)

ಚಕ್ರತೀರ್ಥ : ಮಹಾದೇವನ ತಪಸ್ಸಿನ ಸಮಯದಲ್ಲಿ ವಿಷ್ಣು ಭಗವಂತನು ತನ್ನ ಚಕ್ರದಿಂದ ನಿರ್ಮಿಸಿರುವನು. ಆದ್ದರಿಂದ ಚಕ್ರತೀರ್ಥ ಎಂದು ಹೆಸರು. ಸಂಕಟಾದೇವಿ, ನಾಗೇಶ್ವರ, ಪಂಚಗಂಗಾ, ವೇಣು ಮಾದವ, ಬುದ್ಧ ಕಾಲೇಶ್ವರ, ತ್ರೈಲಂಗ ಸ್ವಾಮಿಯ ಮೂರ್ತಿ, ಕಾಲಭೈರವ. ಬ್ರಹ್ಮನ ಗೌರವವನ್ನು ಕೆಡಿಸುವುದಕ್ಕೋಸ್ಕರ ಮಹಾದೇವನು ತನ್ನ ಶರೀರದಿಂದ ಕಾಲಭೈರವನನ್ನು ಸೃಷ್ಟಿ ಮಾಡಿದನು. ವಾರಣಾಸಿ ಕ್ಷೇತ್ರಕ್ಕೆ ಇವನು ಮುಖ್ಯ ಕಾವಲುಗಾರನಾಗಿರುತ್ತಾನೆ. ದುಷ್ಟರಿಗೆ ಶಿಕ್ಷೆಯನ್ನು, ಶಿಷ್ಟರಿಗೆ ರಕ್ಷಣೆಯನ್ನು ಕೊಡುತ್ತಾನೆ. ದಂಡಪಾಣಿ, ವಿಷಯಭೈರವ, ತ್ರಿಲೋಚನ, ಬಡಾಗಣೇಶ, ಕಾಶಿದೇವಿ, ವೃದ್ಧ ಕಾಲೇಶ್ವರ, ಅಗಸ್ತ್ಯೇಶ್ವರ, ಮಾನಮಂದಿರ ವಿಶಾಲಾಕ್ಷಿ, ದಶಾಶ್ವಮೇಧ ಘಾಟ್ (ಬ್ರಹ್ಮನು ಹತ್ತು ಅಶ್ವಮೇಧ ಯಾಗವನ್ನು ಮಾಡಿದ ಸ್ಥಾನ), ಶೀತಲಾ, ಅರವತ್ತನಾಲ್ಕು ಯೋಗಿನಿ, ಕೇದಾರೇಶ್ವರ, ಹರಿಶ್ಚಂದ್ರ ಘಾಟ್, ಸತ್ಯಹರಿಶ್ಚಂದ್ರನು ಇಲ್ಲಿಯೇ ಸ್ಮಶಾನ ಕಾಯುವ, ಚಂಡಾಲನಾಗಿ ತನ್ನ ಪತ್ನಿಯಿಂದ, ಮಗನ ದಹನ ಸಂಸ್ಕಾರಕ್ಕೆ ಕರವನ್ನು ಕೇಳುತ್ತಾನೆ. ರಾಜನ ಸತ್ಯಧರ್ಮ ಪ್ರತಿಜ್ಞಾ ಪಾಲನೆಗೆ ಸಂತೋಷಪಟ್ಟು ವಿಷ್ಣು ಪ್ರತ್ಯಕ್ಷನಾಗಿ ರೋಹಿತಾಶ್ವನಿಗೆ ಪುನರ್ಜನ್ಮ ನೀಡಿ ಆಶೀರ್ವದಿಸುತ್ತಾನೆ. ಮಾನೇಶ್ವರ, ತಿಲಭಾಂಡೇಶ್ವರ, ಮಹಾದೇವನ ಲಿಂಗಮೂರ್ತಿ ಪ್ರತಿದಿನ ಒಂದು ಎಳ್ಳಿನಷ್ಟು ಬೆಳೆಯುತ್ತದೆ. ಆದ್ದರಿಂದ ತಿಲಭಾಂಡೇಶ್ವರ ಎಂದು ಕರೆಯುತ್ತಾರೆ. ಚಿಂತಾಮಣಿ ಗಣೇಶ, ದುರ್ಗಾಬಾಡಿ (ಈ ಗುಡಿ ಕಾಶಿಯ ದಕ್ಷಿಣ ಪಂಕ್ತಿಯಲ್ಲಿದೆ). ನಾಟರ್‌ನ ಮಹಾರಾಣಿ ಭವಾನಿಯು ಇದನ್ನು ನಿರ್ಮಿಸಿರುತ್ತಾಳೆ. ಗುಡಿಯಲ್ಲಿ ಹತ್ತು ಭುಜಗಳಿಂದ ಶೋಭಿಸುವ ದುರ್ಗಾದೇವಿಯ ವಿಗ್ರಹವಿದೆ. ಇಲ್ಲಿ ಕೋತಿಗಳಿಂದ ಜಾಗ್ರತೆಯಾಗಿರಬೇಕು.

ಕಾಶಿ ಹಿಂದು ವಿಶ್ವವಿದ್ಯಾನಿಲಯ : ಕಾಶಿ ಹಿಂದು ವಿಶ್ವವಿದ್ಯಾನಿಲಯವನ್ನು ಸಾವಿರದ ಒಂಭೈನೂರ ಹದಿನಾರರಲ್ಲಿ ಮಹಾಮನಾ ಪಂಡಿತ್ ಮದನಮೋಹನ ಮಾಲವೀಯನು ಸ್ಥಾಪಿಸಿರುತ್ತಾನೆ. ಇದು ಈಗ ಏಷಿಯಾದ ದೊಡ್ಡ ವಿಶ್ವವಿದ್ಯಾನಿಲಯ. ಮಾಲವೀಯನ ಜನ್ಮ ಸಾವಿರದ ಎಂಟುನೂರ ಅರವತ್ತ ಒಂದು ಡಿಸೆಂಬರ್ ಹದಿನೆಂಟನೇಯ ತಾರೀಕು ಆಯಿತು. ಸಾವಿರದ ಒಂಭೈನೂರ ನಲವತ್ತ ಆರು ನವಂಬರ ಹನ್ನೆರಡು ಕಾಶಿಯಲ್ಲಿಯೇ ಮರಣ ಹೊಂದಿದನು.

ಈ ವಿಶ್ವವಿದ್ಯಾನಿಲಯದ ಭೂಮಿಯನ್ನು ಕಾಶಿ ನರೇಶನು ದಾನವಾಗಿ ಕೊಟ್ಟಿರುವನು. ವಿಶ್ವವಿದ್ಯಾನಿಲಯದ ಆವರಣವು ಕಾಲೇಜು, ಹಾಸ್ಟೆಲ್, ಕರ್ಮಚಾರಿಗಳ ಮನೆ ಇವುಗಳಿಂದ ತುಂಬಿರುತ್ತದೆ. ಈ ವಿಶ್ವವಿದ್ಯಾಲಯವು ವೈದ್ಯಕೀಯ, ಇಂಜಿನಿಯರಿಂಗ್, ಪ್ರಾಚೀನ ಸಭ್ಯತೆ ಮತ್ತು ವಿಜ್ಞಾನ ಮುಂತಾದ ಎಲ್ಲಾ ವಿಷಯಗಳಲ್ಲಿ ಶಿಕ್ಷಣವನ್ನು ಕೊಡುವಲ್ಲಿ ಸುವಿಧಾ ಸವಲತ್ತುಗಳನ್ನು ಹೊಂದಿರುತ್ತದೆ. ಆದ್ದರಿಂದ ಇದು ವಿಶ್ವವಿಖ್ಯಾತವಾದ ವಿದ್ಯಾಲಯವಾಗಿರುವುದು.

**ವಾರಣಾಸಿಯ ಘಟ್ಟಗಳು :** ವಾರಣಾಸಿ ತನ್ನ ಗಂಗಾ ಘಟ್ಟಗಳಿಗೆ ಪ್ರಸಿದ್ಧವಾಗಿದೆ. ಘಟ್ಟಗಳಲ್ಲಿ ಅನೇಕ ದೇವತೆಗಳ ಗುಡಿಗಳು ಇವೆ. ಇಲ್ಲಿಯ ಘಟ್ಟಗಳು ಕಲ್ಲಿನಿಂದ ಗಟ್ಟಿಯಾಗಿ, ಶಾಶ್ವತವಾಗಿ ಅಳಿಯದಂತೆ ಕಟ್ಟಲಾಗಿದೆ. ಇಲ್ಲಿ ಗಂಗೆಯು ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತಾಳೆ. ಇಲ್ಲಿ ಹನ್ನೆರಡು ತಿಂಗಳು ನೀರು ತುಂಬಿರುತ್ತದೆ. ಬೇಸಿಗೆಯಲ್ಲಿಯೂ ನೀರು ಘಟ್ಟಗಳನ್ನು ಬಿಟ್ಟು ಹೋಗುವುದಿಲ್ಲ. ಇಲ್ಲಿಯ ಪ್ರಸಿದ್ಧ ಘಟ್ಟಗಳು ಈ ರೀತಿಯಾಗಿ ಇವೆ - ಮಣಿಕರ್ಣಿಕಾ ಘಾಟ್, ಪಂಚಗಂಗಾ ಘಾಟ್, ಹರಿಶ್ಚಂದ್ರ ಘಾಟ್, ಅಸ್ಸಿ ಘಾಟ್, ಕೇದಾರ ಘಾಟ್, ಸಿಂಧಿಯಾ ಘಾಟ್, ದಶಾಶ್ವಮೇಧ ಘಾಟ್, ಬೋಸ್ಲ ಘಾಟ್, ಮೀರಾ ಘಾಟ್, ರಾಮ ಘಾಟ್, ಬ್ರಹ್ಮ ಘಾಟ್, ರಾಜ ಘಾಟ್ ಇತ್ಯಾದಿಗಳು ಮುಖ್ಯ. ಮಣಿಕರ್ಣಿಕಾ, ದಶಾಶ್ವಮೇಧ, ಹರಿಶ್ಚಂದ್ರ ಹಾಗೂ ಕೇದಾರ ಘಾಟ್‌ಗಳಲ್ಲಿ ಜನಸಂದಣಿ ಜಾಸ್ತಿ ಇರುತ್ತದೆ. ಈ ಘಾಟ್‌ಗಳು ಧಾರ್ಮಿಕ ಹಾಗೂ ಐತಿಹಾಸಿಕ ರೀತಿಯಲ್ಲಿ ತುಂಬಾ ಮಹತ್ವವನ್ನು ಹೊಂದಿವೆ. ದಶಾಶ್ವಮೇಧ ಘಾಟ್ ಎಂದರೆ ಅದರಲ್ಲಿ ಬ್ರಹ್ಮನು ಹತ್ತು ಅಶ್ವಮೇಧ ಯಜ್ಞವನ್ನು ಮಾಡಿದ್ದಾನೆ. ಮಾತ್ರವಲ್ಲ ಕಾಶಿಯ ಮುಖ್ಯ ಜನಸಂದಣಿ ತುಂಬಿರುವ ಮುಖ್ಯ ಮಾರ್ಕೆಟ್ ಪಕ್ಕದಲ್ಲಿಯೇ ಇದೆ. ಇಲ್ಲಿ ಯಾತ್ರಿಕರು ಸಾಯಂಕಾಲ ತಿರುಗಾಡಲು ಕೂಡಾ ಬರುತ್ತಾರೆ. ಹರಿಶ್ಚಂದ್ರ ಘಾಟ್ ಸತ್ಯ ಹರಿಶ್ಚಂದ್ರನಿಂದ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ಈಗಲೂ ಸ್ಮಶಾನ ಇದೆ. ನಂತರ ಕೇದಾರ ಘಾಟ್ ಇದೆ. ಅಸ್ಸಿ ಘಾಟ್‌ನಲ್ಲಿ ಗೋಸ್ವಾಮಿ ತುಲಸೀದಾಸನು ತನ್ನ ಶರೀರವನ್ನು ತ್ಯಜಿಸಿದನು. ಕಾಶಿಯ ಘಾಟ್‌ಗಳು ಸೂರ್ಯೋದಯ, ಸೂರ್ಯಾಸ್ತಗಳಲ್ಲಿ ತುಂಬಾ ಸುಂದರವಾಗಿ ಕಾಣುತ್ತವೆ. ಆದ್ದರಿಂದ ಕಾಶಿಯಲ್ಲಿ ನೌಕಾವಿಹಾರವನ್ನು ಜನರು ಇಚ್ಛಿಸುತ್ತಾರೆ.

***

23.

# ಪ್ರಮುಖ ಮಾರ್ಗ ಪರಿಚಯಗಳು

ಪೂರ್ವ ರೈಲ್ವೆ ಮುಗಲ್ ಸರಾಯಿ ಜಂಕ್ಷನ್‌ನಿಂದ ಕಾಶಿ ವಿಶ್ವನಾಥ ಸ್ಟೇಶನ್ ಏಳು ಮೈಲು ದೂರ ನಂತರವೇ ವಾರಣಾಸಿ ಕಂಟೋನ್ಮೆಂಟ್ ಸ್ಟೇಶನ್ ಇದೆ. ಕಾಶಿ ಸ್ಟೇಶನ್ನಿಂದ ವಿಶ್ವನಾಥನ ಮಂದಿರ ಸುಮಾರು ಎರಡು ಮೈಲು. ಈ ಸ್ಟೇಶನ್ನಿನ ಪಕ್ಕದಲ್ಲಿಯೇ ಒಂದು ಧರ್ಮಶಾಲೆ ಕೂಡ ಇದೆ. ಘಾಟ್‌ಗಳ ಆಕರ್ಷಣೀಯ ದೃಶ್ಯ, ಎತ್ತರದ ಮೆಟ್ಟಿಲುಗಳ ಸಾಲುಗಳು, ನಗರದ ಸುಂದರ ದೃಶ್ಯಗಳು ಯಾತ್ರಿಕರನ್ನು ರೋಮಾಂಚನಗೊಳಿಸುತ್ತವೆ. ಕಾಶಿ ವಿಶ್ವನಾಥ ಅಂದರೆ ರಾಜಘಾಟ್‌ನಿಂದ ಸ್ಟೇಶನಿನ ಕಡೆ ಹೋದರೆ ಸ್ಟೇಶನಿನ ಹತ್ತಿರ ಚುಂಗಿ ಜೀತಮಲ್ ಗಿರಿಧರಲಾಲ್‌ನ ಧರ್ಮಶಾಲೆ. ಇಲ್ಲಿ ಒಂದು ಮಾರ್ಗ ಸೇತುವೆಯ ಮಾರ್ಗವಾಗಿ ತಿರುಗಿ ಹೊರಗಡೆ ಹೋಗಿದೆ. ಮುಂದೆ ಮಚೋದರಿ ಎಂಬ ನಾಲ್ಕು ರಸ್ತೆ ಸೇರುವ ಜಾಗ ಇದೆ. ಇಲ್ಲಿಂದ ಒಂದು ರಸ್ತೆ ಗೋಕುಲಚಂದ್. ಖತ್ರಿಪಾರ್ಕ್ ವಿಶ್ವೇಶ್ವರಗಂಜ್ ಬಜಾರ್, ಅನ್ನಪೂರ್ಣ ಗಂಜ್‌ಗಾಗಿ ಬುಧಕಾಲ ಮತ್ತು ಮೃತ್ಯುಂಜಯ ಮಹಾದೇವನ ಹತ್ತಿರಕ್ಕಾಗಿ ದಾರಾ ನಗರಕ್ಕೆ ಹೋಗಿದೆ. ಇನ್ನೊಂದು ಭೈರವನಾಥ್ ಕಾಟ್‌ಕಹವೇಲಿಗಾಗಿ ಗೋಪಾಲ ಮಂದಿರಕ್ಕೆ ಒಂದು ರಸ್ತೆ ಹೋಗಿದೆ. ಹೆಡ್ ಪೋಸ್ಟ್ ಆಫೀಸ್ ನಾಗರಿ ಪ್ರಚಾರಿಣಿ ಸಭಾ, ಕೋತವಾಲಿಯಿಂದ ಕಂಪನಿಬಾಗ್ ಮೈದಾಗಿನ್ ನಾಲ್ಕು ರಸ್ತೆಯಿಂದ ಒಂದು ರಸ್ತೆ ಜೈನ ಮಂದಿರ ಹರಿಶ್ಚಂದ್ರ ಸ್ಕೂಲ್, ಗೋರಖನಾಥನಟೀಲಾಕ್ಕಾಗಿ ಜಾಸನಗಂಜ್, ಈಶ್ವರಗಾಂಗಿ, ಜೈತುಪುರದಿಂದ ಆಲಯಪುರಕ್ಕೆ ಹೋಗಿದೆ. ನಾಲ್ಕು ರಸ್ತೆ ಸೇರುವಲ್ಲಿ ಇನ್ನೊಂದು ರಸ್ತೆ ರೇವಾಭಾಯಿ ಧರ್ಮಶಾಲೆ ಮೋತಿಲಾಲ್ ಡಾಲ್ಮಿಯನ ಧರ್ಮ ಶಾಲೆ, ರಾಧಾ ಚಿತ್ರ ಮಂದಿರ, ಸಿಟಿ ಪೋಸ್ಟ್ ಆಫೀಸ್, ಘಂಟಾಘರ್ ಚೌಕ್ ಇಲ್ಲಿಂದ ಒಂದು ರಸ್ತೆ ಕಚೇರಿ ಬಜಾರ್, ಔರಾಂಬಾಕ್ಕಾಗಿ ರಂಗೀನದಾಸ, ಬಲಕ್ಕೆ ರಾಮಘಾಟ್, ಎಡಕ್ಕೆ ದೂದ್ ವಿನಾಯಕ್ಕಾಗಿ ಪಂಚಗಂಗಾಕ್ಕೆ ಹೋಗಿದೆ. ಇನ್ನೊಂದು ಮಚರಟೊಟಾ, ಚೌಕದ ಸರ್ಕಲ್‌ನಿಂದ ರಾನಿಕುಂವ, ಸುಖಲಾಲ್ ಸಾವನ ಫಟಕ್, ಲಕ್ಶಿ ಚೌತರ ನಂದಸಾಹದಿಂದ ಕಚೇರಿ ಬಜಾರ್‌ಗೆ ಸೇರುತ್ತದೆ. ಒಂದು ಸಣ್ಣ ಮಾರ್ಗ ಗಡ್‌ವಾಸಿರೊಲಾ, ಗಮಾಮಠ, ಸಿದ್ಧೇಶ್ವರಿಗಾಗಿ ಸಂಕಟಘಾಟ್‌ಗೆ ಹೋಗಿದೆ, ಇನ್ನೊಂದು ಗೋಲಾಗಲಿಗಾಗಿ ನಯಾಘಾಟ್‌ಗೆ ಹೋಗಿದೆ.

ಚೌಕದ ಪಾಟಕ್‌ನಿಂದ ಎರಡನೆಯ ರಸ್ತೆ ಕಚೌಡಿಗಲಿ, ಬ್ರಹ್ಮನಾಲ್,

ಮಣಿಕರ್ಣಿಕಾಗೆ ಹೋಗಿದೆ. ಮೂರನೇಯ ರಸ್ತೆ ನೇಪಾಲಿ ಖಪ್ರಾ, ನೀಲಕಂಠ ಜ್ಞಾನವ್ಯಾಪಿ, ಗಲಿವಿಶ್ವೇಶ್ವರನಾಥ್, ಲಾಹೌರಿಟೋಲಾ, ಕಾಲ್ಕಾಗಲಿ, ಮೀರಘಾಟ್, ತ್ರಿಪುರ ಭೈರವಿ, ಮಾನ ಮಂದಿರ, ದಶಾಶ್ವಮೇಧ ಘಾಟ್, ದೇಶಬಂಧು ಪಾರ್ಕ್‌ಗಾಗಿ ಬಂಗಾಲಿಟೋಲಾ ಕೇದಾರ ಘಾಟ್‌ಗೆ ಹೋಗಿದೆ. ಚೌಕದ ಸರ್ಕಲ್‌ನಿಂದ ಇನ್ನೊಂದು ರಸ್ತೆ ದಾಲ್‌ಮಂಡಿ, ಬೆನಿಯಪಾರ್ಕ್ ಚೇತಗಂಜ್‌ಗೆ ಹೋಗಿದೆ. ಚೌಕದಿಂದ ಮುಂದೆ ಇಲಹಾಬಾದ್ ಬೇಂಕ್, ಚಿತ್ರ, ಕಾರ್‌ಮಾಯಿಕೇಲ್, ಲೈಬ್ರೇರಿ, ಆದಿವಿಶ್ವೇಶ್ವರ, ಬಾಂಸ್ ಕಾಫಾಟಕ್ ದರ್ಭಂಗಾದ ಮಹಾರಾಣಿ ಲಕ್ಷ್ಮೀಪತಿಯ ರಾಮಮಂದಿರ ಒಡ್ಡಾದೇವ, ಮಹಾರಾಣಿಯ ಶಿವಾಲಯಕ್ಕಾಗಿ ದಶಾಶ್ವಮೇಧ ಘಾಟ್‌ನ ಕಡೆ ಹೋಗುತ್ತದೆ. ಚೌಕದಿಂದ ಸೀದ ಹೋದರೆ ಗೋದೌಲಿಯಾ, ಜಂಗಮವಾಡಿ, ಮಹಾರಾಜ ಕೂಚ್‌ಬಹಾರ್‌ಕಾ, ಠಾಕೂರ್‌ಬಾಡಿ, ಸೋನಾರ್‌ಪುರ, ಹರಿಶ್ಚಂದ್ರ ರೋಡ್, ಕೀನಾರಾಮ, ವಾಟರ್‌ವರ್ಕ್ಸ್, ಭದೈನಿ, ರಾಮಮಂದಿರ, ಲೋಲಾರ್ಕಕುಂಡ, ರಾಜಾ ಅಮೇಟಿಕಾ ಮಕಾನ್, ರಾನಿಮಝೋಲಿ ಕಾ ಮಕಾನ್, ನಾಗೌದಾ ರಾಜ್ಯ, ಕಾಶೀ ರಾಜ ಕಾ ಮಕಾನ್, ಸರಗೂಜ ಮತ್ತು ರಾಜ ಡುಮ್‌ರಾವ್ ಕಾ ಮಕಾನ್, ಲಲ್ಲಾಮಿಶ್ರ ಕಾ ಬಾವಲಿ, ಶೀತಲದಾಸ್ ಕಾ ಅಖಾಡ, ಜಗನ್ನಾಥ್‌ಜೀ ಕಾ ಮಂದಿರ್, ಲೌಹಿರ್‌ಪುರ್ ಕಾ ಮಕಾನ್‌ಗಾಗಿ ಪಂಚಕೋಶಿಯ ಮಾರ್ಗಕ್ಕೆ ಸೇರಿದೆ. ಇನ್ನೊಂದು ಅಸ್ಸಿಯಿಂದ ರಾಜವಿಜಯಗಡ, ಕುರುಕ್ಷೇತ್ರ, ರಾನಿಬಡಹರ್‌ಕಾಶಿವಾಲಾ, ಸ್ವಾಮಿ ಭಾಸ್ಕರಾನಂದ ಸಮಾಧಿ, ದುರ್ಗಾಕುಂಡಕ್ಕಾಗಿ ಮುಕ್ತಾಗಾಚಾಕೆ ರಾಜಾ ಕೋಠಿಗೆ ಹೋಗಿದೆ. ಮೂರನೇ ರಸ್ತೆ ರಾಣಿ ಬಿನಾಗ ಕಿ ಕೋಠಿ, ಮತ್ತು ಸಂಕಟಮೋಚನಕ್ಕಾಗಿ, ದೇಶಭಕ್ತ ಶ್ರೀ ಶಿವಪ್ರಸಾದ್ ಜೀ ಗುಪ್ತಾಕೀ ಕೋಠಿ, ಮಯ್ಯ ಸಾಹಬ್‌ಕಾ ಬಾಗ್‌ನಿಂದ ನಗ್ವಾಘಾಟ್‌ಗೆ ಹೋಗಿದೆ. ಇಲ್ಲಿಂದ ಒಂದು ರಸ್ತೆ ಹಿಂದೂ ವಿಶ್ವವಿದ್ಯಾಲಯಕ್ಕೆ ಹೋಗಿದೆ. ದುರ್ಗಾ ಕುಂಡದಿಂದ ಒಂದು ರಸ್ತೆ ಕಾಶ್ಮೀರಿಗಂಜ್, ಭೋಜ್‌ವಾಕ್ಕೆ ಹೋಗಿದೆ. ಎರಡನೇಯ ರಸ್ತೆ ರಾಣಿ ಬಡ್‌ಹರ್ ಕಿ ಕೋಠಿ ಓಸ್‌ಬಾಲ್ ಜೈನ್ ಮಂದಿರ್, ವಾಟರ್ ವರ್ಕ್ಸ್, ಸಖಿಧಾರಾ, ಬಿನಗಾ ಅನಾಥಾಲಯ, ಹಿಂದೂಸ್ಕೂಲ್, ಕಾಶಿ ನರೇಶ್ ಕಾ ಭಾಗ್, ಬಟುಕಭೈರವ ಚಮಚ್ಛಾದೇವಿಗಾಗಿ ವೈದ್ಯನಾಥ್‌ಜೀಗೆ ಹೋಗುತ್ತದೆ. ಬೇಲ್‌ಪುರ ಸರ್ಕಲ್‌ನಿಂದ ಎರಡನೇ ರಸ್ತೆ ರೆವಡೀಕುಂಡ, ಜಯನಾರಾಯಣಸ್ಕೂಲ್, ದೇವಕಿನಂದನ್‌ಕಿ ಹವೇಲಿ, ಗಿರಿಬಾಘುರ್, ರಾಮಕೃಷ್ಣ ಸೇವಾಶ್ರಮ (ಹತ್ತಿರದ ಗಲ್ಲಿಯಿಂದ ರಾಮಕುಂಡ ಮತ್ತು ಚೊಟಿಗೌಬೀ ಇದೆ) ಸದಾನಂದನ ಅನಾಥಾಲಯ,

ಗುರುಕಾಬಾಗ್, ಥಿಯೋಸಫಿಕಲ್ ಸೊಸೈಟಿ, ಕಾಶಿನರೇಶನ ತಹಸೀಲ್ದಾರಿ, ಇಲ್ಲಿಂದ ಒಂದು ರಸ್ತೆ ಕಾಶಿ ಕ್ಲಬ್, ದಾಪೂಜಿಕ ಮಂದಿರ ಮತ್ತು ಪಾಠಶಾಲಾ ಡಾಕ್ಟರ್ ಭಗವಾನ್‌ದಾಸ್‌ಜಿಕಾ ಬಾಗ್‌ಗಾಗಿ ಸಿಂಗರಾ ಸರ್ಕಲ್‌ನಲ್ಲಿ ಆಸ್ಪತ್ರೆ ಮಿರ್ಜಾ ಜನಾನಾಮಿಶನ್ ಚಕಲಾವಾಲಾಭಾಗ್, ವಿದ್ಯಾಪೀಠ, ಶ್ರೀ ಕೃಷ್ಣ ಧರ್ಮಶಾಲಾಕ್ಕಾಗಿ ವಾರಾಣಾಶಿ ಜಂಕ್ಷನ್ (ರೈಲ್ವೇ ಸ್ಟೇಶನಿಗೆ ಹೋಗಿದೆ. ಇಲ್ಲಿಂ ಒಂದು ರಸ್ತೆ ವಿಜಯಾನಗರಸ್‌ಕಿಪರಡೆಗೆ ಇನ್ನೊಂದು ರಸ್ತೆ ಮಾಲ್‌ಗೊದಾವ್‌ಗಾಗಿ ಲಹಮಾರಾಕ್ಕೆ ಹೋಗಿದೆ. ಕಾಶಿ ಕ್ಲಬ್‌ನ ಸರ್ಕಲ್‌ನಿಂದ ಮುನ್ಸಿಬೇನಿಲಾಲಾಕಾ ಭಾಗ್ ಶ್ರೀ ಜಗನ್ನಾಥ ಪ್ರಸಾದ್ ಖತ್ರಿಕಾಭಾಗ್, ಬಿಡಲಾಭಾಗ್, ಆನಂದ್‌ಭಾಗ್ ಬಡ್‌ಕಿ ಗೋಭಿ ಬಿಲಾಸ್‌ಪುರ್ ಕೋಠಿ ಮತ್ತು ಭಾಗ್ ರಾಮನಗರ ಚಂಪಾರಿನ್‌ನರಾಜ ಮೋಹನ ವಿಕ್ರಮ ಶಾಹ್ ನಕೋಠಿ ಮತ್ತು ಭಾಗ್, ಗೊ. ರಾಮಚರಣಪುರಿ, ಅಜಮಲ್‌ಗಡ ಪ್ಯಲೇಸ್ ಮತ್ತು ಮೋತಿಝೀಲ್, ವ್ಯಾಸನಕುಂವ, ಮಂಡು ಆಡೀಹದ ಸ್ಟೇಶನ್ ಮುಂದಿನ ಸರ್ಕಲ್‌ನಿಂದ ದಕ್ಷಿಣ ಚಿತಯಿಪುರ್ ಉತ್ತರ ಬನಾರಸ್‌ಕೇಂಟ್, ಪಶ್ಚಿಮ ಮಂಡು ಆಡೀಹದಾ ಬಡಾ ತಾಲಾಬ್, ಬಾಲಾಪುರ್ ಭುಲನ್‌ಪುರ, ರಾಜಮಂಸಿ ಮಾಧವಲಾಲ್ ಸಿ.ಎಸ್. ಅಯಿ. ಕಿಕೋಠಿಯಿಂದ ಸ್ವಾಮಿ ಭಾಸ್ಕರಾನಂದನ ತಾಲಾಬ್‌ಗೆ ಹೋಗಿದೆ. ಗುದೌಲಿಯ ಗಿರಿಜಾಘರ್‌ನ ಸರ್ಕಲ್‌ನಿಂದ ಒಂದು ಗಲ್ಲಿ (ಸೂರ್ಯಕುಂಡ ಲಕ್ಷ್ಮೀಕುಂಡ, ಕಾಲೀಮಠ, ಸರಸ್ವಗಿರಿ, ಬೇನಿಯ ಮಠ) ಸನಾತನಧರ್ಮ ಸ್ಕೂಲ್ ಪಾರ್ಕ್ ಹಳೆಯ ಮುನ್ಸಿಪಲ್ ಆಫೀಸ್, ಮಹಾರಾಜ ಹಥುವಾಕಿ ಕೋಠಿ, ಪಿಶಾಚಮೋಚನ, ರಾಜಮಾಧವಲಾಲ್ ಕಾ ಬಾಗ್, ಭಾರತಧರ್ಮ ಮಹಾಮಂಡಲ (ರಾಮ ಕಟೋರಕ್ಕೆ ಒಂದು ರಸ್ತೆ ಎರಡನೆದ್ದು ಜಗತ್‌ಗಂಜ್‌ಗೆ) ಮುಂದೆ ಕ್ವೀನ್ಸ್ ಕಾಲೇಜ್‌ನ ದೇಸರ್, ನದೇಸರ್‌ಕೋಠಿ, ಬನಾರಸ್ ಕ್ಲಬ್, ಮುಂದೆ ಕಲಕ್ಟರಿ, ಕಚಹರಿ, ಜಿಲ್ಲಾಬೋರ್ಡ್‌ಕ ದಫ್ತರ್, ಬೋಜುಬೀರ್,. ಮಹಾರಾಜ ಜೀತೇಂದ್ರ ಮೋಹನ ಟೌಗೋರ್‌ಕಾ ಹರಿಧಾಮ್, ಕ್ಷತ್ರೀಯ ಕಾಲೇಜ್, ಬಾಜಾರ್, ಶಿವಪುರ್, ಅನ್ನಪೂರ್ಣ ಋಷಿಕುಲ್ ಆಶ್ರಮಕ್ಕೆ ಹೋಗಿದೆ.

ಒಂದು ರಸ್ತೆ ಹೇಸ್ಟಿಗ್ಸ್‌ಹೌಸ್, ಕಬ್ರಿಸ್ತಾನ್ (ಸ್ಮಶಾನ), ರಾಜಾ ಚೌಲೀಶಂಕರನು ಮಾಡಿಸಿರುವ ಅಂಧಾಖಾನ, ಸೆಂಟ್ರಲ್ ಜೈಲ್, ಪೋಲೀಸ್‌ಲೈನ್, ಪಿಸನ್‌ಹರಿಯಾಕಾಕುಂವ, ಪಾಂಡೇಪುರ್. ಬಾಜಾರ್‌ಗಾಗಿ ಸಾರನಾಥ್ ಮತ್ತು

ಬಾಬುಕಾ ಬಂಗಲಾ, ರಾಜಾ ಜೌನಪುರ್‌ಕಾ ಮಕಾನ್, ಕಾಟನ್‌ಮಿಲ್, ಶ್ರೀ ಗುರುಚರಣ ಪ್ರಸಾದ್‌ಜಿಕಾ ಬಾಗ್, ಜೀಬಿಂಗ್ ಇನ್ಸ್‌ಸ್ಟ್ಯೂಟ್, ನಾಟಿ ಇಮಾಲಿ, ರಾಜ ಆವಗಡ್‌ಕೀ ಕೋಠಿ, ಈಶ್ವರ್ ಗಾಂಗೀಕಾ ತಲಾಬ್, ಜೌಸಾನಗಂಜ್, ಬಾಗೇಶ್ವರಿಜಿ, ನಾಗಕುಂವಕ್ಕೆ ಹೋಗುತ್ತಾ ಬನರಾಸ್ ಸೀಟಿ ಸ್ಟೇಶನ್‌ಗೆ ಹೋಗಿದೆ.

ಜಗತ್‌ಗಂಜ್‌ನ ಸರ್ಕಲ್‌ನಿಂದ ಒಂದು ರಸ್ತೆ ಜನಾನಮಿಶನ್, ಪಶು ಆಸ್ಪತ್ರೆ, ಗಣೇಶ್‌ಬಾಗ್ ಕಬೀರ್‌ಜೀಕಾಸ್ಥಾನ್ ಜನಾನಾ ಆಸ್ಪತ್ರೆ, ಶಿವಪ್ರಸಾದ್ ಗುಪ್ತ ಆಸ್ಪತ್ರೆ, ಸ್ವಾಮಿಬಾಗ್, ಜ್ಞಾನ್‌ಮಂಡಲ್‌ನ ಹತ್ತಿರದ ಸರ್ಕಲ್‌ನಿಂದ ಒಂದು ರಸ್ತೆ ಬಾಬುಕಿ ಬಜಾರ್, ಲೊಹಟಿಯಾ, ದಯಾನಂದ ಕಾಲೇಜ್‌ಗೆ ಹೋಗುತ್ತಾ ಜೌಸಾನ್‌ಗಂಜ್‌ನಲ್ಲಿ ಸೇರುತ್ತದೆ. ಇನ್ನೊಂದು ರಸ್ತೆ ಗೋಲಾದೀನಾನಾಥ್, ಬೇತಿಯಾಕಿ ಕೋಠಿಯಿಂದ ಕಾಶಿಪುರಕ್ಕಾಗಿ ರಾಜದರ್‌ವಾಜಾದಲ್ಲಿ ಸೇರುತ್ತದೆ.

## ಕಾಶಿಧರ್ಮಶಾಲೆಗಳು

ಶ್ರೀ ಕೃಷ್ಣ ಧರ್ಮ ಶಾಲೆ (ವಾರಾಣಾಸಿ ಕೇಂಟ್) ಪಾಂಡೇ ಧರ್ಮ ಶಾಲೆ (ಗೊದೌಲಿಯಾದಲ್ಲಿ) ಹರ್‌ಸುಂದರಿಧರ್ಮ ಶಾಲಾ (ಗೊದೌಲಿಯಾದಲ್ಲಿ) ರೇವಾಬಾಯಿ ಧರ್ಮಶಾಲಾ (ಮೈದಾಗಿನ್‌ನಲ್ಲಿ ರಘುನಾಥದಾಸ್ ಮಂದಿರ್ ಧರ್ಮಶಾಲಾ (ಮೈದಾಗಿನ್‌ದಲ್ಲಿ) ಜಯಸವ್ವಾಲ್‌ಧರ್ಮ ಶಾಲಾ (ವಿಶ್ವೇಶ್ವರಗಂಜ್‌ದಲ್ಲಿ) ವೈಜನಾಥ ಬುಲಾನಾಲಾ, ತಾರಾಚಂದ್ ಖತ್ರಿ ಧತ್ರಿಧರ್ಮ ಶಾಲಾ (ಹರ್‌ದಯಾಲ್‌ನಲ್ಲಿ ಮಣಿಕರ್ಣಿಕಾ ಸರ್ಕಲ್‌ನಲ್ಲಿ) ರಾಣಿ ಪದ್ಮಾವತಿ ಧರ್ಮ ಶಾಲಾ (ನೇಪಾಲಿಖಪ್‌ಡಾದಲ್ಲಿ) ಜೇಠಾಭಾಯಿ ಧರ್ಮ ಶಾಲಾ (ಲಲಿತಾಘಟ್‌ನಲ್ಲಿ) ಬಟುಕಾ ರಾಮ್ ಧರ್ಮಶಾಲೆ (ಕಾಲಿಕಾ ಗಲ್ಲಿಯಲ್ಲಿ) ನೇಪಾಲಿ ಮಂದಿರ್ ಧರ್ಮ ಶಾಲಾ (ಶಕರ್‌ಕಂದ್‌ಗಲ್ಲಿಯಲ್ಲಿ) ಭಗತ್‌ರಾಯ್ ಧರ್ಮಶಾಲೆ, (ಶಕರ್‌ಕಂದ್‌ಗಲ್ಲಿಯುಲ್ಲಿ) ಬಂಗಲಾಧರ್ಮಶಾಲೆ (ಹೌಜಕಟೋರಬಾಂಸ್ ಘಾಟಿಕ್) ಸಿಂಧಿ ಧರ್ಮಶಾಲಾ (ಅಗಸ್ತ್ಯಕುಂಡ) ಶ್ರೀಮತಿ ಕಮಲಾ ದೇವಿಧರ್ಮಶಾಲಾ (ದಶಾಶ್ವಮೇಧಘಾಟ್) ರಾಧಾಕೃಷ್ಣ ಶಿವದತ್ತ ರಾಯ್ ಧರ್ಮಶಾಲಾ (ಜ್ಞಾನವ್ಯಾಪೀ ವಾರಣಾಸಿಯಲ್ಲಿ)

# ಸಾರನಾಥ ಅಥವಾ ಬುದ್ಧ ಕಾಶಿ

ಸಾರನಾಥದ ಬೌದ್ಧಸ್ತೂಪ ಕಾಶಿಯಿಂದ ಏಳು ಮೈಲು ದೂರದಲ್ಲಿ ಇದೆ. ಇದನ್ನು ಸಾಮ್ರಾಟ ಅಶೋಕನು ಕಟ್ಟಿಸಿರುವನು. ಇದು ಕಾಲಪರಿಸ್ಥಿತಿಯಿಂದ ಭಗ್ನವಾಗ್ಗಿ ಭೂಮಿಯ ಒಳಗಡೆ ಸೇರಿಹೋಯಿತು. ಇದನ್ನು ಭಾರತದ ಮಾಜಿ ಗವರ್ನರ್ ಜನರಲ್ ಲಾರ್ಡ್ ಕರ್ಜನ್ ಪುನಃ ಜೀರ್ಣೋದ್ಧಾರ ಮಾಡಿದನು. ಕೌತುಕಾಗಾರದಲ್ಲಿ ತುಂಡಾಗಿರುವ ಅಶೋಕಸ್ತಂಭ, ಸಿಂಹಗಳ ಮೂರ್ತಿ, ಬುದ್ಧನ ಧ್ಯಾನ ಮೂರ್ತಿ, ಕಲ್ಲಿನಿಂದ ತಯಾರಿಸಿರುವ ಛತ್ರ, ಇವುಗಳು ಅಗೆತದಿಂದ ಭೂಗರ್ಭದಲ್ಲಿ ಪ್ರಾಪ್ತವಾಗಿರುವುದು ಅಲ್ಲದೆ ಅಸಂಖ್ಯಾತ ಮಣ್ಣಿನ ಪಾತ್ರೆಗಳ ಅವಶೇಷಗಳು, ಅನೇಕ ಕಲ್ಲಿನ ಮೂರ್ತಿಗಳು, ಐತಿಹಾಸಿಕ ಹಾಗೂ ಬೌದ್ಧ ಧರ್ಮಾನುಯಾಯಿಗಳ ಪ್ರೇಮ, ಶ್ರದ್ಧಾ ಮನೋರಂಜನೆಯ ಅನೇಕ ವಸ್ತುಗಳು ಇಲ್ಲಿ ಇವೆ. ಈ ಕೌತುಕಾಕಾರದ ಹತ್ತಿರ ಅತಿ ಎತ್ತರ ಗಗನಚುಂಬಿ ಸ್ತೂಪಗಳು ತಲೆ ಎತ್ತಿನಿಂತು ದರ್ಶನಾರ್ಥಿಗಳಿಗೆ ಪ್ರಾಚೀನ ಭಾರತೀಯ ಕೀರ್ತಿಯನ್ನು ಸಾರುತ್ತವೆ ಹಾಗೂ ಭಗವಾನ್ ಬುದ್ಧನ ಪ್ರೇಮ ಮತ್ತು ಅಹಿಂಸೆಯ ಸಂದೇಶಗಳನ್ನು ತಿಳಿಸುತ್ತದೆ. ಬುದ್ಧನು ಜ್ಞಾನ ಪ್ರಾಪ್ತಿಯ ನಂತರ ಇಲ್ಲಿಯೇ ತನ್ನ ಪ್ರಥಮ ಉಪದೇಶವನ್ನು ತನ್ನ ಶಿಷ್ಯರಿಗೆ ಕೊಟ್ಟಿರುವನು. ಇದರಿಂದ ಬೌದ್ಧ ಧರ್ಮ ಅವಲಂಬಿಗಳು ಇಲ್ಲಿಗೆ ತುಂಬಾ ಮಹತ್ವವನ್ನು ಕೊಡುತ್ತಾರೆ.

# ವ್ಯಾಸಕಾಶಿ ಅಥವಾ ರಾಮನಗರ

ಒಂದು ಸಮಯದಲ್ಲಿ ವ್ಯಾಸ ಮಹರ್ಷಿಯು ಮಹಾದೇವನಿಂದ ಕುಪಿತನಾಗಿ ಇನ್ನೊಂದು ಕಾಶಿನಗರವನ್ನು ನಿರ್ಮಿಸಬೇಕೆಂದು ಅನೇಕ ಕಾಲ ಕಠೋರ ತಪಸ್ಸನ್ನು ಮಾಡುತ್ತಾನೆ. ಆಗ ಮಹಾದೇವನಿಗೆ ಕೂಡ ವ್ಯಾಸನ ತಪಸ್ಸು ಫಲಿಸುವುದೆಂದು ಭಾವಿಸಿ ಅನ್ನಪೂರ್ಣೆಯನ್ನು ವ್ಯಾಸನ ಹತ್ತಿರ ತಪಃಭಂಗಕ್ಕಾಗಿ ಕಳಿಸುತ್ತಾನೆ. ಅನ್ನಪೂರ್ಣಾದೇವಿಯು ಒಂದು ವೃದ್ಧೆಯ ರೂಪತಾಳಿ ವ್ಯಾಸನಲ್ಲಿ ಈ ಸ್ಥಳದಲ್ಲಿ ಮರಣ ಹೊಂದಿದರೆ ಏನಾಗುತ್ತದೆ ಎಂದು ಪ್ರಶ್ನಿಸುತ್ತಾಳೆ. ವ್ಯಾಸನು ಮೋಕ್ಷವನ್ನು ಪಡೆಯುತ್ತಾರೆ ಎಂದು ಉತ್ತರಿಸುತ್ತಾನೆ. ಆದರೂನು ಅನ್ನಪೂರ್ಣಾದೇವಿಯು ಪುನಃ ಪುನಃ ಇದೇ ಪ್ರಶ್ನೆಯನ್ನು ಕೇಳುತ್ತಾಳೆ. ಕೋಪಗೊಂಡ ವ್ಯಾಸನು ಇಲ್ಲಿ ಮೃತಪಟ್ಟ ಜೀವಿಯು ಕತ್ತೆಯಾಗಿ ಹುಟ್ಟುತ್ತಾರೆ ಎಂದು ಹೇಳುತ್ತಾನೆ. ಆಗ

ಅನ್ನಪೂರ್ಣದೇವಿಯು ತಥಾಸ್ತು ಎಂದು ಅದೃಶ್ಯಳಾಗುತ್ತಾಳೆ. ಆದ್ದರಿಂದ ವ್ಯಾಸಕಾಶಿಯಲ್ಲಿ ಸತ್ತುಹೋಗುವ ಜೀವಿಯು ಕತ್ತೆಯಾಗಿ ಹುಟ್ಟುತ್ತಾರೆ ಎಂದು ಜನರು ನಂಬುತ್ತಾರೆ. ವ್ಯಾಸಕಾಶಿಯಲ್ಲಿ ಒಂದು ಮಂದಿರದಲ್ಲಿ ವ್ಯಾಸನಿಂದ ಸ್ಥಾಪಿಸಲ್ಪಟ್ಟ ಒಂದು ಶಿವಲಿಂಗವಿದೆ. ಕಾಶಿ ನರೇಶನ ಕೋಟೆಯ ಒಳಗಡೆ ಕಾಶಿನರೇಶನಿಂದ ಸ್ಥಾಪಿಸಿರುವ ಸಂಗಮರ್ಮರ್ ಕಲ್ಲಿನಿಂದ ತಯಾರಿಸಿದ ಗಂಗಾದೇವಿಯ ಮೂರ್ತಿ ಇದೆ. ಇದೆ ಗಂಗಾಮಹಲ್‌ನಲ್ಲಿ ವ್ಯಾಸದೇವನ ತೈಲಚಿತ್ರ ದರಬಾರ್‌ಹಾಲ್ ಚಿತ್ರಾ ಶಾಲಾ ಇದೆಲ್ಲಾ ನೋಡುವಂತಹ ವಸ್ತುಗಳು.

***

## ಶ್ರೀ ಅನ್ನಪೂರ್ಣ ಆರತಿ

ಬಾರಂಬಾರ್‌ಪ್ರಣಾಮ್ ಮೈಯಾ ಬಾರಂಬಾರ್ ಪ್ರಣಾಮ್ |
ಜೊನಹಿ ಧ್ಯಾವೆ ತುಮ್‌ಹೆ, ಲೇತ್ ಹೋತ್ ಸಬ್‌ಕಾಮ್ ||
ಪ್ರಲಯ ಯುಗಾಂತರ್ ಔರ್ ಜನ್ಮಾಂತರ್, ಕಾಲಾಂತರ್, ತಕ್‌ನಾಮ್|
ಸುರ್‌ಅಸುರೋಂಕಿ ರಚನಾ ಕರ್‌ತಿ ಕಹಾ ಕೃಷ್ಣ ಕಹಾ ರಾಮ್ ||
ಚೊ ಮಹಿಂಚರಣ್ ಚತುರ್ ಚತುರಾನನ್, ಚಾರುಚಕ್ರಧರ್ ಶ್ಯಾಮ್ |
ಚಂದ್ರಚೂಡ್ ಚಂದ್ರಾನನ್ ಚಾಕರ್ ಶೋಭಾ ಲಕೌಹಿ ಲಲಾಮ್ |
ದೇವಿ ದೇವ ದಯನೀಯ ದಶಾಮೆ ದಯಾದಯಾ ತಬ್ ನಾಮ್ ||
ತ್ರಾಹಿ ತ್ರಾಹಿ ಶರಣಾಗತ್ ವತ್ಸಲ್ ಶರಣ ರೂಪ್ ತಬ್ ಧಾಮ್ |
ಶ್ರೀ ಹಿ ಶ್ರದ್ಧಾ ಶ್ರೀಹಿ ವಿದ್ಯಾ ಹ್ರೀಂ ಕಮಲಾ ಕಾಮ್ |
ಕ್ರಾಂತಿ ಭ್ರಾಂತಿ ಮಯಿ ಕಾಂತಿ ಶಾಂತಿ ಮಯಿ ವರದೇತ್ ನಿಷ್ಕಾಮ್ ||

## ಅನ್ನಪೂರ್ಣ ವಂದನಾ

ವೃಷಬೇಂದ್ರ ಗಂತಂ ವಂದೇ ಚಂದ್ರ ಚೂಡಾ ದುರ್ಘ ಹಾರಿಣೀಮ್ |
ಕರುಣಾದ್ರ್ರದೃಶನ್ ದೇವಿಮಾನ್ನ ಪೂರ್ಣಾ ಗಿರೊಂದ್ರ ಜಾಮ್ || ಎಲ್ಲ ಭಕ್ತರಲ್ಲಿಯು ದಯಾದೃಷ್ಟಿಯನ್ನು ಬೀರುವ ಪರ್ವತರಾಜನ ಪುತ್ರಿಯು ಮಹಾದೇವನ ಅರ್ಧಾಂಗಿನಿಯು ಆದ ಅನ್ನಪೂರ್ಣದೇವಿಯನ್ನು ವಂದಿಸುತ್ತೇನೆ.

## || ವಿಶ್ವನಾಥಾಷ್ಟಕ ||

ಗಂಗಾತರಂಗ ರಮಣೀಯ ಜಟಾಕಲಾಪಂ |
ಗೌರಿನಿರಂತರ ವಿಭೂಷಿತ ವಾಮಭಾಗಮ್ ||
ನಾರಾಯಣಪ್ರಿಯ ಮನಂಗಮದಾಪಹಾರಂ|
ವಾರಾಣಸಿಪುರ ಪತಿಂಭಜವಿಶ್ವನಾಥಂ ||೧||

ವಾಚಾಮಗೋಚರಮನೇಕ ಗುಣಸ್ವರೂಪಂ |
ವಾಗೀಶವಿಷ್ಣುಸುರಸೇವಿತಪಾದ ಪೀಠಮ್ ||
ವಾಮೇನವಿಗ್ರಹ ವಿರೇಣ ಕಲತ್ರವಂತಮ್ |
ವಾರಣಾಸಿಪುರ ಪತಿಂ ಭಜವಿಶ್ವನಾಥಮ್ ||೨||

ಭೂತಾಧಿಪಂ ಭುಜಗಭೂಷಣ ಭೂಷಿತಾಂಗಮ್ |
ವ್ಯಾಘ್ರಾಜಿನಾಂಬರಧರಂ ಜಟಿಲಂತ್ರಿನೇತ್ರಂ ||
ಪಾಶಾಂಕುಶಾಭಯ ವರಪ್ರದಶೂಲಪಾಣಿಮ್ |
ವಾರಣಾಸಿಪುರ ಪತಿಂ ಭಜವಿಶ್ವನಾಥಮ್ ||೩||

ಶ್ವೇತಾಂಶು ಶೋಭಿತ ಕಿರೀಟ ವಿರಾಜಮಾನಂ |
ಭಾಲೇಕ್ಷಣಾನಲ ವಿಶೋಷಿತ ಪಂಚಬಾಣಮ್ ||
ನಾಗಾಧಿಪಾರಚಿತಭಾಸುರಕರ್ಣ ಪೂರಮ್ |
ವಾರಣಾಸಿಪುರ ಪತಿಂ ಭಜವಿಶ್ವನಾಥಂ ||೪||

ಪಂಚಾನನಂ ದುಂತಮತ್ತಮತಂಗಜಾನಾಂ |
ನಾಗಾಂತಕಂ ಧನುಜಪುಂಗವ ಪನ್ನಗಾನಾಮ್ ||
ದಾವಾನಲಂ ಮರಣಶೋಕ ಜರಾಟವೀನಾಮ್ |
ವಾರಣಾಸಿಪುರಪತಿಂ ಭಜವಿಶ್ವನಾಥಂ ||೫||

ತೇಜೋಮಯಂ ಸುಗುಣನಿರ್ಗುಣಮ್ ದ್ವಿತೀಯಂ |
ಆನಂದಕಂದಮಪರಾಜಿತಮ ಪ್ರಮೇಯಂ ||

ನಾಗಾತ್ಮಕಂ ಸಕಲ ನಿಷ್ಕಲಮಾತ್ಮರೂಪಮ್ ।
ವಾರಣಾಸಿಪುರಪತಿಂ ಭಜ ವಿಶ್ವನಾಥಮ್ ॥೬॥

ರಾಗಾದಿದೋಷರಹಿತಂ ಸ್ವಜನಾನುರಾಗಂ ।
ವೈರಾಗ್ಯ ಶಾಂತಿ ನಿಲಯಂ, ಗಿರಿಜಾಸಹಾಯಮ್ ॥
ಮಾಧುರ್ಯ್ಯ ಧೈರ್ಯ್ಯಸುಭಗಂ ಗರಲಾಭಿರಾಮಮ್ ।
ವಾರಣಾಸಿಪುರಪತಿಂ ಭಜವಿಶ್ವನಾಥಮ್ ॥೭॥

ಆಶಾರ ವಿಹಾಯ ಪರಿಹೃತ್ಯ ಪರಸ್ಯ ನಿಂದಾಂ ।
ಪಾಪೇ ರತಿಂಚ ಸುನಿವಾರ್ಯ್ಯ ಮನಃ ಸಮಾಧೌ ॥
ಆದಿತ್ಯ ಹೃತ್ಕಮಲ ಮಧ್ಯಗತಂಪರೇಶಂ ।
ವಾರಣಾಸಿಪುರಪತಿಂ ಭಜ ವಿಶ್ವನಾಥಮ್ ॥೮॥

ವಾರಾಣಸೀಮಪುರಪತೇಃ ಸ್ತವನಂ ಶಿವಸ್ಯ ।
ವ್ಯಾಖ್ಯಾತಮಷ್ಟಕಮಿದಂಪಠತೇ ಮನಷ್ಯಃ ॥
ವಿದ್ಯಾಂಶ್ರೀಯಂ ವಿಪುಲಸೌಖ್ಯ ಮನಂತಕೀರ್ತಿಂ ।
ಸಂಪ್ರಾಪ್ಯ ದೇಹವಿಲಯೇ ಲಭತೇ ಚಮೋಕ್ಷಂ ॥೯॥

ವಿಶ್ವನಾಥಾಷ್ಟಕಮಿದಂಯಃ ಪಠೇಚ್ಛಿವಸನ್ನಿಧೌ ।
ಶಿವಲೋಕಮವಾಪ್ನೋತಿ ಶಿವೇನಸಹಮೊದತೆ ॥೧೦॥

ಇತಿಶ್ರೀಮಹರ್ಷಿ ವ್ಯಾಸಪ್ರಣೀತಂ ಶ್ರೀವಿಶ್ವನಾಥಷ್ಟಕಂ ಸಂಪೂರ್ಣಂ॥

## ಶಂಕರ ವಂದನಾ

ಕರ್ಪೂರಗೌರಂ ಕರುಣಾವತಾರಂ ಸಂಸಾರಸಾರಂ ಭುಜಗೇಂದ್ರಹಾರಂ ।
ಸದಾವಸಂತಂ ಹೃದಯಾರವಿಂದೇ ಭವಂಭವಾನೀ ಸಹಿತಂ ನಮಾಮಿ ॥

***

# ಭೋಲೆನಾಥ್‌ಕೀ ಆರತಿ

ಕೈಲಾಶೀ ಕಾಶೀಕೆ ವಾಸೀ ಅವಿನಾಶೀಮೇರಿ ಸುಧಿಲೀಜ್ಯೆ ||
ಸೇವಕ್‌ಜಾನ್ ಸದಾ ಚರನ್‌ಕಿ ಅಪನಿ ಜಾನ್ ಕೃಪಾಕೀ ಜ್ಯೆ||
ಅಭಯದಾನ್ ದೀ ಜ್ಯೆ ಪ್ರಭುಮೋರೆ ಸಕಲ್ ಸೃಷ್ಟೀಕೆ ಹಿತಕಾರಿ ||
ಭೋಲೇನಾಥ್ ತುಮ್ ಭಕ್ತ ನಿರಂಜನ್ ಭವ ಭಂಜನ್ ಭವಶುಭಕಾರೀ ||ಟೇರ್ || ದೀನದಯಾಲು ಕೃಪಾಲ್‌ಕಾಲರಿಪುಅಲಖ್ ನಿರಂಜನ್ ಶಿವಯೋಗಿ| ಮಂಗಲ್‌ಮೂರ್ತಿ ಅನೂಪ್‌ರೂಪ್ ಛವಿ ಅಖಿಲ್ ಭುವನ್‌ಕೇತುಮ್ ಭೋ || ಬಾಬಾ ಅಂಗ್‌ರಂಕ್ ರಸ್ ಭೀನೊ ಉಮಾಪದನ್ ಕಿ ಛವಿ ನ್ಯಾರೀ || ಭೋ || ಅಸುರ್ ನಿಕಂದನ್ ಸಬ್‌ದುಃಖ ಭಂಜನ್ ವೇದ್‌ಬಖಾನೆ ಜಗ್‌ಜಾನೆ || ಖಂಡಮಾಲ್‌ಗಲ್ ಬ್ಯಾಲ್ ಭಾಲ್ ಶಶಿನೀಲಕಂಠ್ ಲೀಯ ಮನ್‌ಮಾನೆ || ಗಂಗಾಧರ್ ತ್ರಿಶೂಲಧಾರೀ ವಿಷಧರ್ ಬಾಘಂಬರ್ ಧರ್ ಗಿರ್‌ಧಾರಿ || ಭೋಲೆ || ಯಾ ಭವಸಾಗರ್ ಅತಿ ಅಗಾಧ್ ಹೆ ಪಾರ್ ಉತರ್ ಕೈಸೆ ಸೂಜೆ | ಯಾಮೆಗ್ರಾಹ್ ಮಗರ್ ಬಹು ಕಛಪ್ ಯೊಮಾರಗ್ ಕೈಸೆ ಸೂಜೆ | ನಾಮ್‌ತುಮಾರಿ ನೋಕಾ ನಿರ್ಮಲ್ ತುಮ್ ಕೇವಟ್ ಶಿವ ಅಧಿಕಾರಿ| ಮ್ಯೆ ಜಾನೂ ತುಮ್ ನಿಪಟ್ ಸಯಾನೆ ಅವಗುಣ್ ಮೇರೆ ಸಬ್ ಢಕಿಯೋ| ಸಬ್ ಅಧಿಕಾರ್ ಕ್ಷಮಾಕರ್ ಶಂಕರ್ ಕಿಂಕರ್‌ಕಿ ಬಿನ್‌ತಿ ಸುನಿಯೋ | ಹಮ್‌ತೊ ಪ್ರಭುಜೀ ಕಲ್ಬಾರು ಹೊ ಮ್ಯೆಂಹು ಪ್ರಾಣಿ ಸಂಸಾರೀ ||ಭೋಲೆ||

ಕಾಮ್ ಜೊ ಮಹಾ ಅಪರ್ ಬಲ್ ಇನ್‌ಸೆ ಮೇರಿ ಬಸ್‌ನಾಯಿ | ಲೋಭ್ ಮೋಂಹ್ ಯೊ ಸಂಗ್ ನಹೀಂ ಜಾಡೆ ಆನ್‌ದೇತ್ ನಹೀಂ ಪ್ರಭು ತಾಯಿ || ಕ್ಷುಧಾ ತೃಷಾ ನಿತ್‌ಲಗೀ ರಹತ್‌ಹೆ ಬಾಡುಪರ್ ತೃಷ್ಣಾಭಾರಿ ||.ಭೋಲೆ || ತುಮ್ ಹಿ ಶಿವ್‌ಜಿ ಕರ್ತಾ ಹರ್ತಾ ತುಮ್‌ಹಿ ಜಗ್‌ಕೆ ರಖ್‌ವಾಲೆ| ತುಮ್‌ಹಿಂ ಮಗನ್ ಮಗನ್ ಮುನಿ ಪೃಥ್ವಿಪರ್ವತ್ ಪುತ್ರಿಕ ಪ್ಯಾರೆ ತುಮ್‌ಹೀಂ. ಪವನ್ ಹುತಾಸನ್ ಶಿವ್‌ಜಿ ತೂ ದಿನಕರ್‌ಕರ್ ಶಶಿಹಾರೆ || ಭೋಲೆ ||

ಪಶುಪತಿ ಅಘರ್ ಅನ್‌ಗ್ ಅಮರೇಶ್ವರ್ ಯೋಗೇಶ್ವರ್ ಶಿವಗೋಸ್ವಾಮಿ| ವೃಷಭಾರೂಡ್ ಗುಡುಗುರು ಗಿರ್‌ಪತಿ ಗಿರಿಜಾವಲ್ಲಭ ತಿಸ್ಯಾಮಾ || ಶೋಭಾ ಸಾಗರ್

ರೂಪ್ ಉಜಾಗರ್. ಗಾವತ್‌ಹೇ ಸಬ್ ನರ್‌ನಾರಿ || ಭೋಲೆ ||

ಮಹಾದೇವ್ ದೇವನ್‌ಕೆ ಅಧಿಪತಿ ಫಣಿಪತಿ ಭೂಷಣ್ ಅತಿಸಾಜ್ಜೈ ||

ಶೀಶ್‌ಲಿಲಾಟ್ ಲಾಲ್ ದೋವಮಾ ಲೋಚನ್ ಜಿಸ್‌ಕೆ ಉತ್‌ರೆ ದುಖ್‌ಭಾಜೆ| ಪರಮ್ ಪುನೀತ್ ಪುರಾತನ್ ಮಹಿಮಾ ತ್ರಿಭುವನ್ ಬಿಸ್ತಾರೀ || ಭೋಲೆ || ಬ್ರಹ್ಮಾವಿಷ್ಣು ಮಹೇಶ್ ಶೇಷ್ ಮುನಿ ನಾರದ್ ಆದಿಕರತ್ ಸೇವಾ | ಜಿನ್‌ಕಿ ಇಚ್ಛಾ ಪೂರಕ್ ಕಿನ್‌ಹೀಂ ನಾಥ್ ಸನಾತನ್ ಹರ್‌ದೇವಾ|| ಭಕ್ತಿಮುಕ್ತಿ ಕೆ ದಾತಾ ಶಂಕರ್ ಸದಾ ನಿರಂತರ್ ಸುಖ್‌ರಾಸೀ || ಭೋಲೆ || ಮಹಿಮಾಶ್ರೇಷ್ಠ ಮಹೇಶ್ವರ್‌ಜೀ ಕೋ ಸಿಖೇ ಸುನೆ ಜೊ ನಿತ್ ಗಾವೇ|| ಅಷ್ಟಸಿದ್ಧಿ ನೌನಿಧಿ ಸುಖ್ ಸಂಪತ್ತಿ ಸ್ವಾಮಿಭಕ್ತಿಮುಕ್ತಿಪಾವೆ || ಶ್ರೀ ಅಹಿಭೂಷಣ್ ಸಂಪನ್ನ್ ಹೋಯಿಕರ್ ಕೃಪಾ ಕರೋ ಶಿವ ತ್ರಿಪುರಾರೀ ಭೋಲೇನಾಥ್ ತುಮ್ ಭಕ್ತ ನಿರಂಜನ್ ಭವಭಂಜನ್ ಭವ ಶುಭಕಾರೀ ||



